# ಶೂದ್ರ

"our children in school fail because they are afraid, bored and confused"

—*John Holt*

ಎನ್. ಡಿ. ಜಯಪ್ಪ — ಎಸ್. ವೆಂಕಟರಾಂ — ಗೌತಮ್ ಅಧಿಕಾರಿ
ದೊಡ್ಡರಂಗೇಗೌಡ — ಶೇಷಗಿರಿ ಜೋಡಿದಾರ್ — ವಿ. ಪಿ. ಜಯಲಕ್ಷ್ಮಿ
ಧರಣೇಂದ್ರ ಕುರಕುರಿ — ಶ್ರೀ ಕೃಷ್ಣ ಆಲನಹಳ್ಳಿ

ಒಳನೋಟ : ಬಿ. ಎಸ್. ನಾಗರತ್ನ—ವಿ. ಆರ್. ಪ್ರತಿಭಾ—ಎಸ್. ಗಾಯತ್ರಿ

ಬೀದಿಮಾತು : ಗುಲಾಮನ ಸ್ವಾತಂತ್ರ್ಯ ಯಾತ್ರೆ — ಸಫೇದ್ ಕುಂಡಲಿಯ ಜಫೇದ್ ಖಾನ್–ಹಿಂಸೆ ಮತ್ತು ದೇವರು–ನನ್ನ ಗೊಮ್ಮಟನಿಗೆ ವಿರಾಮ ಸಿಕ್ಕೀತೆ ?



ಬೆಲೆ : 1-25

ಶೂದ್ರ - ನಿಮ್ಮ ಪ್ರೀತಿಗೆ ದ್ವೇಷಕ್ಕೆ ಪಾತ್ರವಾದ ತಿಂಗಳ ಪತ್ರಿಕೆ

ಫೆಬ್ರವರಿ 1981 ಸಂಪುಟ : 6 ಸಂಚಿಕೆ : 4

ಮುಖಪುಟ : ಅಮೃತಾಷೇರ್‌ಗಿಲ್ (1913-1941) ಈಕೆ ತನ್ನ ಇಪ್ಪತ್ತೆಂಟು ವರ್ಷಗಳಲ್ಲಿ ಚಿತ್ರಕಲೆಗೆ ಸಂಬಂಧಿಸಿದಂತೆ ಸಾಧಿಸಿದ್ದು ಅಪಾರ. ಕೊನೆಗೆ ಅವಳ ಸಾವು ಕೂಡ ದುರಂತದಿಂದ ಕೂಡಿತ್ತು.

ಸಹಾಯಕ ಸಂಪಾದಕರು :

**ಪದ್ಮರಾಜ ದಂಡಾವತಿ — ನಿರ್ಮಲ. ಎಸ್. ರೆಡ್ಡಿ — ಪುರುಷೋತ್ತಮ. ಎ.**

**ಗೋ. ಶ್ರೀನಿವಾಸ**

ಶೂದ್ರ ಬರದಿದ್ದಾಗ, ನಿಮ್ಮ ವಿಳಾಸ ಬದಲಾದಾಗ ಪತ್ರ ಬರೆಯಿರಿ. ದಯವಿಟ್ಟು ಚಂದಾ ಕಳಿಸುವಲ್ಲಿ ಹಿಂದೇಟು ಹೊಡೆಯಬೇಡಿ. ನೀವು ಕಳಿಸುವ ಚಂದಾದಿಂದ ಶೂದ್ರ ಬೆಳೆಯ ಬೇಕಲ್ಲವೇ ? ಕವನ ಕಳಿಸುವವರು 35 ಪೈಸೆ ಸ್ಟ್ಯಾಂಪ್ ಇಟ್ಟು ಕಳಿಸಬೇಕು. ನಾವು ಪ್ರಕಟಿಸ ದಿದ್ದಲ್ಲಿ ವಾಪಸ್ಸು ಕಳಿಸಲು ಅನುಕೂಲವಾಗುವುದು. ಸಂ :

**ವಾರ್ಷಿಕ ಚಂದಾ : 15 ರೂ.**

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜ್ ಅಂಚೆ,
ಬೆಂಗಳೂರು-560 029.

# ಜಾತಿ ಮತ್ತು ವರ್ಗರಹಿತ ಸಮಾಜದ ಸೃಷ್ಟಿ ಮತ್ತು ಅದಕ್ಕನುಗುಣವಾದ ಸಂಘಟನೆಗಳು

—ಎನ್.ಡಿ. ಜಯಪ್ಪ

ಸಾವಿರಾರು ವರ್ಷಗಳ ತನ್ನ ಇತಿಹಾಸದ ನಿರ್ಣಾಯಕ ಘಟ್ಟದಲ್ಲಿ ನಮ್ಮ ಸಮಾಜ ವರ್ಣಾಶ್ರಮ ಧರ್ಮಕ್ಕೆ ಮತ್ತು ಮತವೈಷಮ್ಯಗಳಿಗೆ ಬಲಿಯಾಯಿತು. ಈ ವರ್ಣಾಶ್ರಮ ಧರ್ಮಕ್ಕನುಗುಣವಾಗಿ ಸಮಾಜದಲ್ಲಿರುವ ಇಡೀ ಜನಸಮೂಹವನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂದು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಯಿತು. ಈ ವರ್ಣಾಶ್ರಮ ಧರ್ಮಕ್ಕನುಗುಣವಾಗಿ ನಿರ್ಮಿತವಾದ ಈ ಚತುರ್ವರ್ಣ ವ್ಯವಸ್ಥೆಯಲ್ಲಿ ವರ್ಗವಿಭೇದಗಳನ್ನು ನಾವು ಕಾಣಬಹುದು.

ಬುದ್ಧಿಜೀವಿ ಬ್ರಾಹ್ಮಣನೆನಿಸಿಕೊಂಡ ಪ್ರಜಾರಕ್ಷಕನೋ ಹಾಗೂ ಪ್ರಜಾಪೀಡಕನೋ ಅದವನು ಕ್ಷತ್ರಿಯನಾದ, ವ್ಯಾಪಾರ ವಹಿವಾಟು ನಡೆಸುತ್ತಿದ್ದವನು ವೈಶ್ಯನೆಂದು ಕರೆಯಲ್ಪಟ್ಟ, ವ್ಯವಸಾಯ ಹಾಗೂ ಇನ್ನಿತರ ಸೇವಾಕಾರ್ಯಗಳಲ್ಲಿ ತೊಡಗಿದವರನ್ನು ಶೂದ್ರರೆಂದು ವರ್ಣಿಸಿದರು. ಹೀಗೆ ಕಾಯಕದ ಸ್ವರೂಪದ ಆಧಾರದ ಮೇಲೆ ನಿರ್ಮಿತವಾದ ವರ್ಗಸಮಾಜ ಚತುರ್ವರ್ಣ ವ್ಯವಸ್ಥೆಯು ರೂಪು ತಳೆಯಿತು.

ಚತುರ್ವರ್ಣ ಸಮಾಜ ವ್ಯವಸ್ಥೆ ವಂಶಪಾರಂಪರ್ಯವಾಗಿ ಬೆಳೆದು ಬರುವುದು ಬುದ್ಧಿಜೀವಿಗಳಿಗೆ ಮತ್ತು ಇವರನ್ನು ಬೆಂಬಲಿಸಿ ಉತ್ತಮ ವರ್ಣದವರಾಗಿದ್ದ ಕ್ಷತ್ರಿಯ ಮತ್ತು ವೈಶ್ಯರಿಗೆ ಬೇಕಾಗಿತ್ತು. ಕಾರಣ ಈ ವರ್ಗಗಳು ಶ್ರಮಜೀವಿಗಳಾದ ಶೂದ್ರರನ್ನು ವ್ಯವಸ್ಥಿತವಾದ ಶೋಷಣೆಗೆ ಒಳಪಡಿಸಿದ್ದು ತಮ್ಮ ಸುಲಭೋಪಾಯದ ಸುಖ ಜೀವನಕ್ಕೆ ಶೂದ್ರರ ಶೋಷಣೆಯನ್ನೇ ಅವಲಂಬಿಸಿದ್ದವು. ಅನುವಂಶಿಕವಾಗಿ ಈ ಶೋಷಿತ ಸಾಮಾಜಿಕ ವ್ಯವಸ್ಥೆಯನ್ನು ಮುಂದುವರಿಸಿಕೊಂಡು ಹೋಗಲು ಬುದ್ಧಿಜೀವಿಗಳಾದ ಬ್ರಾಹ್ಮಣರಿಗೆ ಒಂದು ಸೈದ್ಧಾಂತಿಕ ಸಮರ್ಥನೆ ಬೇಕಾಗಿತ್ತು. ಸರಿ, ಅದಕ್ಕಾಗಿಯೇ ಒಂದು ಸಿದ್ಧಾಂತ ತಯಾರಾಯಿತು. ಬ್ರಾಹ್ಮಣರು ಬ್ರಹ್ಮನ ಮುಖದಿಂದ ಸಿಡಿದು ಬಂದವರೆಂದೂ, ಕ್ಷತ್ರಿಯರು ಬ್ರಹ್ಮನ ಭುಜಗಳಿಂದ ಹಾರಿಬಂದವ

ರೆಂದೂ, ವೈಶ್ಯರು ಬ್ರಹ್ಮನ ಹೊಟ್ಟೆಯಿಂದ ಹುಟ್ಟಿ ಬಂದವರೆಂದೂ, ಶೂದ್ರರು ಬ್ರಹ್ಮನ ಪಾದಗಳಿಂದ ಜಾರಿ ಬಂದವರೆಂದೂ ಉಪದೇಶ ಮಾಡಲಾಯಿತು ಮತ್ತು ಈ ಸಿದ್ಧಾಂತಕ್ಕನುಗುಣವಾಗಿ ಬ್ರಾಹ್ಮಣನ ಹೊಟ್ಟೆಯಲ್ಲಿ ಬ್ರಾಹ್ಮಣನೇ ಹುಟ್ಟುವನೆಂದೂ ಹಾಗೂ ಶೂದ್ರನ ಹೊಟ್ಟೆಯಲ್ಲಿ ಶೂದ್ರನಲ್ಲದೆ ಬೇರೊಬ್ಬ ವರ್ಣದವನು ಹುಟ್ಟುವುದು ಸಾಧ್ಯವೇ ಇಲ್ಲವೆಂದೂ ಸಾರಲಾಯಿತು.

ಕ್ರಮೇಣ ವರ್ಣಾಶ್ರಮ ಧರ್ಮಕ್ಕೆ ಒಂದು ಅಮೂರ್ತ ಸ್ವರೂಪ ಕೊಡಲು ಹಾಗೂ ಸಾಮಾನ್ಯ ಜನರಾದ ಶೂದ್ರರಲ್ಲಿ ವರ್ಣವ್ಯವಸ್ಥೆಯ ಬಗ್ಗೆ ನಂಬಿಕೆ ತರಲು ಕರ್ಮ ಸಿದ್ಧಾಂತವನ್ನು ಕಂಡುಹಿಡಿದು ಅದನ್ನು ಯಥೋಚಿತವಾಗಿ ಬೋಧಿಸಲಾಯಿತು. ಕರ್ಮಸಿದ್ಧಾಂತದ ಪ್ರಕಾರ ಒಬ್ಬ ವ್ಯಕ್ತಿ ತನ್ನ ಜನ್ಮಜನ್ಮಾಂತರಗಳ ಕರ್ಮ ಸಂಸ್ಕಾರಕ್ಕನುಗುಣವಾಗಿ, ತಾನು ಬ್ರಾಹ್ಮಣನ ಹೊಟ್ಟೆಯಲ್ಲಿ, ಶೂದ್ರನ ಹೊಟ್ಟೆಯಲ್ಲಿ ಅಥವಾ ಬೇರಿನ್ನಾವುದೇ ವರ್ಣದವನ ಕುಟುಂಬದಲ್ಲಿ ಜನಿಸುವನೆಂದು ಸಿದ್ಧಾಂತ ಮಾಡಲಾಯಿತು.

ಕಾಲಕ್ರಮೇಣ ವರ್ಣಸಿದ್ಧಾಂತ, ಕರ್ಮಸಿದ್ಧಾಂತ ಮತ್ತು ಇದಕ್ಕೆ ಪೂರಕವಾದ ಇತರೇ ನೂರಾರು ಸಿದ್ಧಾಂತಗಳನ್ನು ಸಾಮಾನ್ಯ ಜನರು ಅಥವಾ ಶೂದ್ರರಲ್ಲಿ ಕೆಲವರು ಪ್ರಶ್ನಿಸಿ ಯಾರೆಂದು ತಿಳಿದು ಚತುರ್ವರ್ಣ ಪದ್ಧತಿಯನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದು ಬಿಗಿಪಡಿಸಲಾಯಿತು. ಈ ದಿಶೆಯಲ್ಲಿ ನಮ್ಮ ಪ್ರಾಚೀನ ಹಿಂದೂ ಸಂಸ್ಕೃತಿಗೆ ತಳಪಾಯ ಹಾಕಿದವನ್ನೆಲಾದ 'ಮನು' ಎಂಬ ಮೇಧಾವಿ ಪಂಡಿತನೊಬ್ಬ ಬಹಳವಾಗಿ ಶ್ರಮಿಸಿದ. ಮನುಧರ್ಮ ಶಾಸ್ತ್ರವೆಂಬ ಒಂದು ನೀತಿಸಂಹಿತೆಯನ್ನು ನಿರ್ಮಿಸಿದ. ಈ ನೀತಿಸಂಹಿತೆಯ ಪ್ರಕಾರ ಒಬ್ಬ ಶೂದ್ರ ಓದುವುದೂ, ಬರೆಯುವುದೂ ತಪ್ಪು. ವೇದಪ್ರತಿಗಳನ್ನು ಕಣ್ಣಿನಿಂದ ನೋಡುವುದೂ ವೇದಘೋಷಗಳನ್ನು ಕೇಳುವುದೂ ಮತ್ತವುಗಳನ್ನು ಪಠಿಸುವುದು ಎಲ್ಲವೂ ತಪ್ಪೇ. ಒಂದು ವೇಳೆ ಈ ತಪ್ಪನ್ನು ಶೂದ್ರನು ಮಾಡಿದ್ದೇ ಆದರೆ ಅವನಿಗೆ ಅದಕ್ಕನುಗುಣವಾಗಿ ಕಠಿಣವಾದ ಅಥವಾ ಕಠೋರವಾದ ಶಿಕ್ಷೆಗಳನ್ನವನು ಅನುಭವಿಸಲೇಬೇಕಾಗಿತ್ತು. ಹೀಗೆ ವರ್ಣಾಶ್ರಮ ಧರ್ಮವನ್ನು ಪ್ರತಿಯೊಬ್ಬನೂ ಚಾಚೂ ತಪ್ಪದೇ ಪಾಲಿಸಲೇ ಬೇಕು. ಮತ್ತು ಯಾವ ಸಂದರ್ಭದಲ್ಲೂ ಅವರ ನಡೆನುಡಿಯಲ್ಲಿ ವ್ಯತ್ಯಾಸವಾಗಬಾರದೆಂದು ಮನು ಶಾಸನ ಮಾಡಿದನು.

ಈ ವರ್ಣ ವ್ಯವಸ್ಥೆ ಕರ್ಮಸಿದ್ಧಾಂತ ಮತ್ತು ಮನುಧರ್ಮ ಶಾಸ್ತ್ರಗಳು ಹಿಂದೂ ಸಮಾಜದ ಸೋಪಾನಗಳಾದುವು. ಕಾಲಕ್ರಮೇಣ ವರ್ಣವ್ಯವಸ್ಥೆ ಸಡಿಲವಾಗಿ ಅನೇಕ ಜಾತಿ ಮತಗಳಿಗೆ ಎಡೆ ಮಾಡಿಕೊಟ್ಟಿತು. ಚಾರಿತ್ರಿಕ ಕಾರಣಗಳಿಂದಾಗಿ ನೂರಾರು ಉಪಜಾತಿಗಳು ಜನ್ಮತಾಳಿದುವು. ಆದರೂ ಈ ಇಪ್ಪತ್ತನೆಯ ಶತಮಾನ

ದಲ್ಲಿಯೂ ಸಹ ನಮ್ಮ ಜನ ಮುಖ್ಯವಾಗಿ ಹಳ್ಳಿಗಾಡಿನಲ್ಲಿ ಕರ್ಮಸಿದ್ಧಾಂತದಲ್ಲಿ ಅಪಾರ ನಂಬಿಕೆಯನ್ನಿಟ್ಟಿದ್ದಾರೆ. ಜಾತಿಪದ್ಧತಿ, ವಾಮ ಸಂಹಿತೆ (ಮುಖ್ಯವಾಗಿ ಸ್ತ್ರೀಯರ ವಿಷಯದಲ್ಲಿ 'ನಸ್ತ್ರೀ ಸ್ವಾತಂತ್ರ್ಯಂ ಅರ್ಹತಿ') ಅವರ ಮನಸ್ಸನ್ನು ಕಪಿ ಮುಷ್ಟಿಯಲ್ಲಿ ಹಿಡಿಟ್ಟಿದೆ. ನಗರದಲ್ಲಿರುವ ವಿದ್ಯಾವಂತ, ಆಧುನಿಕ, ಮಧ್ಯಮ ವರ್ಗ ವ್ಯಕ್ತಿಯೂ ಸಹ ತನ್ನ ಖಾಸಗೀ ಜೀವನದಲ್ಲಿ ಜಾತೀಯುವಾದಿಯಾಗಿದ್ದಾನೆ. ಆದ್ದರಿಂದ ಜಾತೀಯ ಭಾವನೆ ಮತ್ತು ಮತ ವೈಷಮ್ಯಗಳನ್ನು ತೊಡೆದುಹಾಕಲು ಒಂದು ಸಾಂಸ್ಕೃತಿಕ ಕ್ರಾಂತಿಯ ಅಗತ್ಯ ಬಹಳವಾಗಿದೆ. ಮನರಂಜನೆ, ಕಲೆ ಮತ್ತು ಶಿಕ್ಷಣ ಈ ಎಲ್ಲ ಕ್ಷೇತ್ರಗಳನ್ನೊಳಗೊಂಡ ವೈಚಾರಿಕ ಕ್ರಾಂತಿಯಾಗಬೇಕಾಗಿದೆ.

ಸಾವಿರಾರು ವರ್ಷಗಳ ವಿದೇಶೀಯರ ದಾಳಿಯಾದಾಗ ವರ್ಣಾಶ್ರಮ ವ್ಯವಸ್ಥೆಗೆ ಪೆಟ್ಟು ಬಿತ್ತು. ಹೆಚ್ಚಾಗಿ ಶೂದ್ರ ವರ್ಗಕ್ಕೆ ಸೇರಿದವರು ಪರಿಸ್ಥಿತಿ ಮತ್ತು ಪ್ರಭಾವಗಳ ಒತ್ತಡಕ್ಕೆ ಮಣಿದು ಅನ್ಯ ಮತಗಳಿಗೆ ಮತಾಂತರವಾದರು. ವರ್ಣ ವ್ಯವಸ್ಥೆಯ ಚೌಕಟ್ಟಿನಲ್ಲಿಯೇ ವರ್ಣಾಶ್ರಮ ಧರ್ಮದ ವಿರುದ್ಧ ಕೆಲವರು ಬಂಡೆದ್ದರು. ಈ ಬಂಡಾಯದ ಫಲವಾಗಿ ಅನೇಕ ಜಾತಿ ಉಪಜಾತಿಗಳು ನಿರ್ಮಿತವಾದವು. ಈ ಎಲ್ಲ ಉಪಜಾತಿಗಳನ್ನು ಒಂದುಗೂಡಿಸಿ, ಕೆಲವು ಸಮಾಜ ವಿಜ್ಞಾನಿಗಳು, ಮೇಲ್ಜಾತಿಯವರು, ಮತ್ತು ಕೀಳ್ಜಾತಿಯವರು ಎಂದು ಮೂರು ಪಂಗಡಗಳಾಗಿ ವಿಂಗಡಿಸಿದ್ದಾರೆ. ಉದಾಹರಣೆಗಾಗಿ ನಮ್ಮ ಕರ್ನಾಟಕವನ್ನು ತೆಗೆದುಕೊಂಡರೆ ಬ್ರಾಹ್ಮಣರು ಮೇಲ್ಜಾತಿಯವರಾಗಿಯೂ, ವೀರಶೈವರು ಮತ್ತು ಒಕ್ಕಲಿಗರು ಮಧ್ಯಮಜಾತಿಯವರಾಗಿಯೂ, ಉಳಿದವರು ಕೀಳ್ಜಾತಿಯವರಾಗಿಯೂ ವಿಂಗಡಿಸಲ್ಪಡುತ್ತದೆ. ಸುಮಾರಾಗಿ ಇದೇ ರೀತಿಯ ಜಾತಿ ಚಿತ್ರಣವನ್ನು ನಾವು ಭಾರತದಾದ್ಯಂತ ಕಾಣಬಹುದಾಗಿದೆ.

ಕಳೆದ ನೂರಾರು ವರ್ಷಗಳಿಂದ ನಮ್ಮ ದೇಶದಲ್ಲಿ ಜಾತೀಯ ಪದರಗಳು ಆಧುನಿಕ ಕಾರ್ಮಿಕವರ್ಗ, ಬಂಡವಾಳಶಾಹಿ, ವ್ಯಾಪಾರಿವರ್ಗ ಮತ್ತು ಮಧ್ಯಮ ವರ್ಗವೇ ಮುಂತಾದ ಅನೇಕ ವರ್ಗಗಳಿಗೆ ಜನ್ಮಕೊಡುತ್ತಾ ಬಂದಿದೆ. ಪಾಶ್ಚಿಮಾತ್ಯರ ಆಳ್ವಿಕೆಯ ಪ್ರಭಾವ ಹಾಗೂ ಕೈಗಾರೀಕರಣ ಈ ವರ್ಗವ್ಯವಸ್ಥೆಯ ಉಗಮಕ್ಕೆ ಕಾರಣ. ಕೈಗಾರಿಕಾ ಕ್ರಾಂತಿಯ ಉಗಮವಾದಂತೆಲ್ಲ ನಿಧಾನವಾಗಿ ವರ್ಣವ್ಯವಸ್ಥೆಯ ಗರ್ಭದಿಂದ ವರ್ಗವ್ಯವಸ್ಥೆ ರೂಪುಗೊಂಡು ಬೆಳೆಯುತ್ತಿದೆ. ಈ ಬೆಳವಣಿಗೆಗನುಗುಣವಾಗಿ ಜಾತಿಸಂಘರ್ಷ, ವರ್ಗಸಂಘರ್ಷಕ್ಕೆಡೆ ಮಾಡಿಕೊಡುತ್ತಿದೆ, ಮತ್ತು ಜಾತಿ ಸಂಘರ್ಷದೊಂದಿಗೆ ವರ್ಗಸಂಘರ್ಷವೂ ನಿಧಾನವಾಗಿ ರೂಪುಗೊಳ್ಳುತ್ತಿದೆ.

ನಮ್ಮ ರಾಜ್ಯದ ಪರಿಸ್ಥಿತಿಯನ್ನೇ ಅವಲೋಕಿಸೋಣ. ಇಲ್ಲಿ ಜಾತಿ ಸಂಘರ್ಷ ಮತ್ತು ವರ್ಗಸಂಘರ್ಷಗಳು ನಿರಂತರವಾಗಿ ವಿಕಾಸವಾಗುತ್ತಿದೆ. ಜಾತಿಪ್ರಜ್ಞೆ ನಮ್ಮ ಪರಿಸರದಲ್ಲಿ ಎದ್ದು ಕಾಣುತ್ತಿರುವುದು ಸ್ವಾಭಾವಿಕವೇ ಆಗಿದೆ. ಆದರೆ ವರ್ಗಪ್ರಜ್ಞೆ ಇನ್ನು ತನ್ನ ಬಾಲ್ಯಾವಸೆಯಲ್ಲೇ ಇದೆ. ತೀವ್ರವಾದ ವರ್ಗಸನ್ನಿವೇಶಗಳನ್ನು ಮೇಲಿಂದ ಮೇಲೆ ಎದುರಿಸಿರುವುದರಿಂದ ಮಾತ್ರ ವರ್ಗಪ್ರಜ್ಞೆ ಬೆಳೆಯುತ್ತದೆ. ಕಳೆದ ಒಂದು ಶತಮಾನದಲ್ಲಿ ಒಂದಾದ ಮೇಲೊಂದರಂತೆ ಜಾತೀಯ ಪದರಗಳು ಆಧುನಿಕ ಮಧ್ಯಮವರ್ಗಕ್ಕೆ ಜಸ್ಪಿವಿತ್ತಿವೆ. ಆಧುನಿಕ ಮಧ್ಯಮವರ್ಗದ ಈ ಜಾತಿಯ ತುಂಡುಗಳು ರಾಜನೀತಿ, ಸರ್ಕಾರಿ ನೌಕರಿ, ಕೈಗಾರಿಕೋದ್ಯಮಗಳು, ಸರ್ಕಾರ ರಚನೆ ಹಾಗೂ ಇನ್ನಿತರ ಅನೇಕ ವೃತ್ತಿಗಳಲ್ಲಿ ತಮ್ಮ ವರ್ಗಕ್ಕನುಗುಣವಾದ ಸ್ಥಾನಗಳಿಗಾಗಿ ಹೋರಾಡುತ್ತಾ ಬಾದಿದೆ. ಕಳೆದೊಂದು ಶತಮಾನದಿಂದ ಸರ್ಕಾರಗಳು ಅನುಸರಿಸಿದ ನೀತಿಯ ಫಲವಾಗಿ ವಿವಿಧ ಜಾತಿಗಳೊಳಗಿನಿಂದ ಹುಟ್ಟಿ ಬಂದ ಮಧ್ಯಮವರ್ಗದ ತುಂಡುಗಳು ಕೆಲಮಟ್ಟಿಗೆ ತಮ್ಮ ವರ್ಗದ ಹಿತವನ್ನು ಸಾಧಿಸಿಕೊಂಡಿವೆ.

ನಮ್ಮ ರಾಜ್ಯದಲ್ಲಿ ಹೈದರಾಲಿ ಮತ್ತು ಟಿಪ್ಪೂಸುಲ್ತಾನರ ಮರಣಾನಂತರ 1884ರಲ್ಲಿ ಬ್ರಿಟಿಷ್ ಸರ್ಕಾರ ಮೈಸೂರನ್ನು ಹಳೆಯ ರಾಜಮನೆತನಕ್ಕೆ ವಹಿಸಿದಂದಿನಿಂದ 1926ರಲ್ಲಿ ದಿವಾನ್ ವಿಶ್ವೇಶ್ವರಯ್ಯನವರ ನಿವೃತ್ತಿಯವರೆಗೆ ಅದು ಬ್ರಾಹ್ಮಣರ ಸುವರ್ಣಯುಗವಾಗಿತ್ತು. ದಿವಾನರಿಂದ ಜವಾನವರೆಗೆ ಅವರದೇ ಅಧಿಕಾರ. ಆಧುನಿಕ ಮಧ್ಯಮವರ್ಗವನ್ನು ಸೃಷ್ಟಿಸಲಿದ್ದ ಒಕ್ಕಲಿಗರು ಬ್ರಾಹ್ಮಣರ ಈ ಏಕಧಿಕಾರದ ವಿರುದ್ಧ ಬಂಡೆದ್ದರು. ಕಾಂಗ್ರೆಸ್ ಚಳವಳಿಯಲ್ಲಿ ಪಾಲ್ಗೊಂಡರು. ಆದರೆ ಈ ಮಧ್ಯೆ 1926ರಿಂದ 1939ರ ವರೆಗೆ ಮುಸ್ಲಿಮ್ ಮಧ್ಯಮವರ್ಗದ ಪ್ರತಿನಿಧಿ ದಿವಾನರಾಗಿದ್ದು ಈ ವರ್ಗ ಹಲಕೆಲವು ಸಾಧನೆಗಳನ್ನು ಪಡೆದುಕೊಂಡಿತು. ತರುವಾಯ 1947ರಿಂದ 1955 ಅಂದರೆ ಕರ್ನಾಟಕ ಏಕೀಕರಣದ ವರೆಗೆ ಒಕ್ಕಲಿಗರ ಮಧ್ಯಮವರ್ಗ ಪ್ರಾಬಲ್ಯಕ್ಕೆ ಬಂತು. ಮೂರು ತಿಂಗಳ ಅವಧಿ ಸಿಕ್ಕಿದರೆ ಸಾಕು ಅವರ ಪೈಕಿಯವನೇ ಮುಖ್ಯಮಂತ್ರಿಯಾಗಬೇಕು. ಕರ್ನಾಟಕ ಏಕೀಕರಣಾನಂತರ ಲಿಂಗಾಯತರ ನಡುವಿನಿಂದ ಬೆಳೆದು ಬಂದ ಮಧ್ಯಮವರ್ಗ ಪ್ರಾಬಲ್ಯಕ್ಕೆ ಬಂತು. ಮತ್ತವರ ಪ್ರಾಬಲ್ಯ 1972ರ ವರೆಗೂ ಮುಂದುವರಿಯಿತು, ಒಕ್ಕಲಿಗರು ಮೂರು ತಿಂಗಳ ಅವಧಿಗೆ ಮುಖ್ಯ ಮಂತ್ರಿ ಆದರೆ ಇವರು ಇತರರಿಗೆ ಒಂದೂವರೆ ತಿಂಗಳ ಅವಧಿಯನ್ನು ಬಿಡದೆ ಹೋದರು. 1972 ರಿಂದೀಚೆಗೆ ಅಲ್ಪಸಂಖ್ಯಾತರ, ಹರಿಜನ, ಗಿರಿಜನರ ಹಾಗೂ ಹಿಂದುಳಿದ ಜಾತಿಗಳ ನಡುವಿಂದ ತಲೆ ಎತ್ತಿ ಬೆಳೆದು ಬಂದ ಮಧ್ಯಮವರ್ಗ ಅಧಿಕಾರದ ಗುದ್ದುಗೆಯನ್ನು ಹಿಡಿಯಿತು. ಇವರಿಗೆ ಕಳೆದ ಮೂವತ್ತು ವರ್ಷಗಳಿಂದ ಮೂಲೆಗುಂಪಾಗಿದ್ದ ಬ್ರಾಹ್ಮಣರು ಬೆಂಬಲಿಗರಾದರು. ಇದೊಂದು ಸ್ಥೂಲ

ಸಮೀಕ್ಷೆ ಎಂಬುದನ್ನು ಮರೆಯಬಾರದು. ಈ ಚಿತ್ರಣಕ್ಕೆ ಅಸಂಖ್ಯಾತ ಸಂಗತಿಗಳು ಅಪವಾದವಾಗಿ ತೋರಬಹುದು.

ಮಧ್ಯಮವರ್ಗ ಶ್ರೀಮಂತರನ್ನು ಕಂಡು ಬೊಗಳುತ್ತದೆ ಮತ್ತು ಬಡತನವನ್ನು ಕಂಡು ನಡುಗುತ್ತದೆ ಎಂಬುದಾಗಿ ಸಮಾಜವಾದೀ ಸಿದ್ಧಾಂತಿ ಕಾರ್ಲ್ - ಮಾರ್ಕ್ಸ್ ರವರು ಮಧ್ಯಮವರ್ಗದ ಗುಣಲಕ್ಷಣಗಳನ್ನು ಚೆನ್ನಾಗಿ ವಿವರಿಸಿದ್ದಾರೆ. ನಮ್ಮ ದೇಶದಲ್ಲಿ ಅನೇಕ ಜಾತೀಯ ಪದರಗಳಿಂದ ತಲೆ ಎತ್ತಿ ಬಂದ ಈ ಆಧುನಿಕ ಮಧ್ಯಮ ವರ್ಗ ಮಾರ್ಕ್ಸ್‌ರವರ ಈ ಮಾತಿಗೆ ಅಪರೂಪವೇನಲ್ಲ. ಈ ಮಧ್ಯಮವರ್ಗಕ್ಕೆ ತನ್ನದೇ ಆದ ಸಾಮಾಜಿಕ ಕಲ್ಪನೆ ಎಂಬುದೇ ಎಂದೂ ಇರಲಿಲ್ಲ. ಮತ್ತೆ ಆ ಕಲ್ಪನೆ ಮುಂದೆ ಬರುವುದೂ ಇಲ್ಲ. ಆದ್ದರಿಂದಲೇ ಅದು ತನ್ನ ಕೈಗೆ ಸಿಕ್ಕಿದ ಬಂಡವಾಳ ಶಾಹಿ ವ್ಯವಸ್ಥೆಯನ್ನೇ ರಾಜ್ಯದಲ್ಲಿ ಮುಂದುವರಿಸಿತು. ಸಾಮಾನ್ಯವಾಗಿ ಹಿಂದುಳಿದ ವರು ಮತ್ತು ಹರಿಜನಗಿರಿಜನರ ನಡುವಿನಿಂದ ಬಂದ ಭೂಹೀನ ಕಾರ್ಮಿಕರು ಗ್ರಾಮೀಣ ನಿರುದ್ಯೋಗಿಗಳ ಬಗ್ಗೆ ಈ ಹಿಂದುಳಿದ ಜಾತಿಗಳ ಮತ್ತು ಹರಿಜನ ಗಿರಿ ಜನರ ಮಧ್ಯಮವರ್ಗ ತನ್ನ ಕಾಲದಲ್ಲಿ ಮೂಲಭೂತವಾಗಿ ವರ್ಗರೀತಿಯಾಗಿ ಏನನ್ನೂ ಮಾಡಿಲ್ಲ ಎಂಬುದನ್ನು ನಾವಿಲ್ಲಿ ಗಮನಿಸಬಹುದು. ಮತ್ತು ಬಂಡವಾಳ ಶಾಹೀ ವ್ಯವಸ್ಥೆಯಲ್ಲಿ ಏನಾದರೂ ಮಾಡಬೇಕೆಂದುಕೊಂಡರೂ ಅದು ಸಾಧ್ಯವಿಲ್ಲದ ಮಾತು. ಆದ್ದರಿಂದಲೇ ಬಂಡವಾಳಶಾಹಿ ವ್ಯವಸ್ಥೆಯನ್ನು ಬೆಳೆಸಿದ್ದು ಮತ್ತು ದುಡಿ ಯುವ ವರ್ಗಗಳ ನ್ಯಾಯಬದ್ಧ ಹಕ್ಕುಗಳನ್ನು ನಿರಾಕರಿಸಿದ್ದೂ ಈ 60–70 ವರ್ಷಗಳ ಮಧ್ಯಮವರ್ಗದ ಆಳ್ವಿಕೆಯ ಮಹತ್ಸಾಧನೆಯಾಗಿ ನಮ್ಮ ಕಣ್ಣಮುಂದೇ ನಿಂತಿದೆ.

ಲಿಂಗಾಯತ ಮಂತ್ರಿಗಳು ಲಿಂಗಾಯಿತ ಗೇಣಿದಾರರಿಗೆ, ಬ್ರಾಹ್ಮಣ ಮಂತ್ರಿಗಳು ಹೋಟೆಲ್ ಕೆಲಸಗಾರರಿಗೆ, ಒಕ್ಕಲಿಗ ಮಂತ್ರಿಗಳು ಸಣ್ಣ ರೈತರಿಗೆ, ಮುಸಲ್ಮಾನ ಮಂತ್ರಿಗಳು ಜಟಕಾದವರಿಗೆ, ಹರಿಜನ ಮಂತ್ರಿಗಳು ಭೂಹೀನ ಕೆಲಸಗಾರರಿಗಾಗಿ ಏನು ಒಳ್ಳೆಯದು ಮಾಡಿದ್ದಾರೆ ? ಅವರನ್ನೇಕೆ ಹೀಗೆ ಕಡೆಗಣಿಸಿದ್ದಾರೆ ? ಎಂಬು ದನ್ನು ವಿಚಾರಮಾಡಿದರೆ ಇವರ ಸಾಧನೆಯ ಅರಿವು ನಮಗೆ ಸ್ಪಷ್ಟವಾಗಿ ದೊರಕು ತ್ತದೆ. ಭೂ ಹೀನರಿಗೆ ಖಾಲಿ ನಿವೇಶನ, ಋಣ ವಿಮೋಚನೆಗೆ ವೃದ್ಧಾಪ್ಯವೇತನ ಮುಂತಾದ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದಿದ್ದೇವೆ. ಇದೆಲ್ಲ ಸೋಷಲಿಸ್ಟ್ ರಿಫಾರಮ್ಸ್ ಅಲ್ಲವೇ ಎಂದು ನಮ್ಮ ಕೆಲವರು ವಾದ ಮಾಡಬಹುದು. ಆದರೆ ಈ ಸುಧಾರಣೆಗಳು ಸಮಾಜದ ಬಂಡವಾಳಶಾಹೀ ಅಡಿಪಾಯವನ್ನು ಅಲುಗಾಡಿಸುವ ಕ್ರಿಯೆಗಳಲ್ಲ. ಅದನ್ನು ಮತ್ತಷ್ಟು ಬಲಪಡಿಸುವ ಪರಿಹಾರ ಕಾರ್ಯಗಳು ಅಷ್ಟೇ ಅಂದ ಮಾತ್ರಕ್ಕೆ ಇವುಗಳಿಗೇನೂ ಬೆಲೆ ಇಲ್ಲವೆಂದು ನಾವು ತಿಳಿಯಬಾರದು.

ಮುಖ್ಯವಾದ ಸಂಗತಿ ಇಷ್ಟು : ಮೇಲ್ಜಾತಿಯಿಂದ ಪ್ರಾರಂಭವಾಗಿ ಅನುಕ್ರಮ ವಾಗಿ ತಲೆ ಎತ್ತಿದ ಈ ಆಧುನಿಕ ಮಧ್ಯಮವರ್ಗ—ಸರ್ಕಾರಿ ನೌಕರಿಗಳು, ರಾಜ ಕಾರಣದಲ್ಲಿ ಸ್ಥಾನಮಾನಗಳು, ಶಾಲಾ ಕಾಲೇಜುಗಳಲ್ಲಿ ಸೀಟುಗಳು ಇವೇ ಮೊದ ಲಾದ- ತನ್ನ ವರ್ಗೀಯ ಹಿತಾಸಕ್ತಿಗಳನ್ನು ತನ್ನ ಇಡೀ ಜಾತಿ ಅಥವಾ ಜನಾಂಗದ ಹಿತ ಎಂದು ಬಣ್ಣ ಕಟ್ಟಿ ಸ್ವಲ್ಪಮಟ್ಟಗೆ ಸಾಧಿಸಿಕೊಂಡಿದೆ. ಈ ವರ್ಗದ ಹಿತ ಮಧ್ಯಮವರ್ಗೀಯ. ಅದರ ಪ್ರಜ್ಞೆ ತಿಳಿದೋ, ತಿಳಿಯದೆಯೋ ಜಾತೀಯವಾಗಿದೆ ಎಂಬುದು ಗಮನಾರ್ಹ. ಆದರೂ ಹಿಂದುಳಿದ ಜಾತಿಗಳಿಂದ ತಲೆ ಎತ್ತಿ ಬಂದ ಈ ಆಧುನಿಕ ಮಧ್ಯಮವರ್ಗದ ಜೈತ್ರಯಾತ್ರೆ ಭಾಗಶಃ ಪ್ರಗತಿಶೀಲವೆಂದು ನಾವು ಒಪ್ಪಿ ಕೊಳ್ಳಲೇಬೇಕು. ಅಂತೆಯೇ ನಮ್ಮ ಇತಿಹಾಸ ಚಕ್ರದಲ್ಲಿ ಇಂದು ಹಿಂದುಳಿದ ಜಾತಿ ಗಳಿಗೆ ಇರತಕ್ಕ ಮೀಸಲಾತಿ ಅನಿವಾರ್ಯವೂ, ಅಗತ್ಯವೂ, ಸಿಂಧುವೂ ಆಗಿದೆ. ವರ್ಗ ಚಕ್ರ ಅಸ್ತಿತ್ವಕ್ಕೆ ಬಂದು ಚಲನೆ ಪಡೆಯುವವರೆಗೆ, ಈ ಜಾತಿಚಕ್ರಕ್ಕೆ ಇನ್ನೂ ಆಯುಷ್ಯವಿದೆ. ಆದ್ದರಿಂದ ಈ ಜಾತಿ ಚಕ್ರದ ಸಾಂಗತ್ಯ ಹಾಗೂ ಸಿಂಧುತ್ವ ಇನ್ನೂ ತೀರಿಲ್ಲ. ಹಿಂದುಳಿದ ಜಾತಿಗಳಿಗಾಗಿ ಮೀಸಲಾತಿಯ ಹೋರಾಟ ಕರ್ನಾಟಕದಲ್ಲಿ ದ್ದಂತೆ ಭಾರತದ್ಯಾಂತ ವ್ಯಾಪಕವಾಗಿ ಇನ್ನೂ ಹರಡಬೇಕಾಗಿದೆ. ಡಾ॥ ಲೋಹಿಯಾ ಇದಕ್ಕೆ ವಿಶೇಷ ಅವಕಾಶ ಎನ್ನುವ ಸಿದ್ಧಾಂತವನ್ನು ಮಂಡಿಸಿದರು.

ಈ ಸತ್ತೆ ಸವಲತ್ತುಗಳನ್ನು ಹಿಂದುಳಿದ ಜಾತಿಗಳ ಚೌಕಟ್ಟಿನೆಡೆಯಲ್ಲಿ ಹಿಂದುಳಿದವರ್ಗಗಳ ಸಲುವಾಗಿ ಮೀಸಲಿಡುವ ವರ್ಗಚಕ್ರಕ್ಕೆ ತಯಾರಿ ನಡೆಸುವುದು ಅಗತ್ಯವಾಗಿದೆ. ಸಣ್ಣ ಮತ್ತು ಮಧ್ಯಮ ವರ್ಗದ ರೈತರು, ಕೃಷಿ ಕಾರ್ಮಿಕರು, ಔದ್ಯೋಗಿಕ ಕಾರ್ಮಿಕರು, ಶೋಷಿತದಲಿತರು, ಆಗಿದ್ದ ಯಾವ ವಿಶೇಷ ಸವಲತ್ತಿಗೂ ಇಂದು ವಂಚಿತರಾಗಿರುವ ಮಹಿಳೆಯರು ಸಂಘಟಿತರಾಗಿ ತಮ್ಮ ಸತ್ತೆ ಸವಲತ್ತುಗಳಿ ಗಾಗಿ ಹೋರಾಡಬೇಕು.

ಸಮಾಜದ ಒಂದು ಅತಿ ಮುಖ್ಯ ಅಂಗವಾದರೂ ಅಲಕ್ಷ್ಯಕ್ಕೆ ಗುರಿಯಾಗಿ ಅನಾಥರಾಗಿರುವ ಬಳಕೆದಾರರು, ಸಣ್ಣ ಕೈಗಾರಿಕೆ ಮತ್ತು ಗುಡಿಕೈಗಾರಿಕೆಯಲ್ಲಿ ಹರಿದು ಹಂಚಿಹೋದ ಅಸಂಖ್ಯಾತ ಅಸಂಘಟಿತ ಕಾರ್ಮಿಕರು, ವಿದ್ಯಾರ್ಥಿಗಳು. ಯುವಜನರು, ನಿರುದ್ಯೋಗಿಗಳು, ಕರಕುಶಲವೃತ್ತಿಗಾರರು, ನವನಿರ್ಮಾಣದ ಹರಿಕಾರರಾದರೂ ಸರಕಾರದ ಅಸಡ್ಡೆಗೆ ಒಳಗಾದ ಅಂತರ್ಜಾತೀಯ ದಂಪತಿಗಳೇ ಮೊದಲಾದ ಸಾಮಾಜಿಕ ಹಿತ್ತಾಸಕ್ತಿಯ ಗುಂಪುಗಳು. ತಮ್ಮ ಸತ್ತೆ ಸವಲತ್ತುಗಳಿ ಗಾಗಿ ಸಂಘಟಿತರಾಗಿ ತಮ್ಮ ಹಕ್ಕುಗಳನ್ನು ಮುಂದಿಟ್ಟು ಹೋರಾಡಬೇಕು. ಮತ್ತು ಹಿಂದುಳಿದ ಜಾತಿಗಳು, ಹರಿಜನ ಗಿರಿಜನರಲ್ಲಿ ಈಗ ಉಂಟಾಗಿರುವ ವರ್ಗವಿಭಜನೆ

ಯನ್ನು ತೀವ್ರಗೊಳಿಸಿ ಅವರಲ್ಲಿರುವ ಶೋಷಿತವರ್ಗವನ್ನು ಬಲಪಡಿಸಬೇಕು. ಈ ಶೋಷಿತರ ಹಾಗೂ ದಲಿತರ ಗುಂಪುಗಳಿಗೆ ಯಥೋಚಿತ ಸ್ಥಾನವಿರುವ ಹೊಂದಾಣಿಕೆಯ ಕಕ್ಷೆಯಲ್ಲಿ ತರಬೇಕು. ಹೀಗೆ ಜಾತೀಯ ಹೊಂದಾಣಿಕೆಯಿಂದ ವರ್ಗೀಯ ಮರುಹೊಂದಾಣಿಕೆಗೆ ಪ್ರವೇಶಮಾಡಬಹುದು. ಈ ಮರುಹೊಂದಾಣಿಕೆ ದುರ್ಬಲ ವರ್ಗದ್ದು ಮತ್ತು ಇದು ಯಾವ ವರ್ಗ ಹೊಂದಾಣಿಕೆಯ ವಿರುದ್ಧ ಎನ್ನುವುದನ್ನು ನಾವು ಸ್ಪಷ್ಟವಾಗಿ ಖಚಿತಪಡಿಸಿಕೊಳ್ಳಬೇಕು. ದೊಡ್ಡ ದೊಡ್ಡ ಭೂಮಾಲೀಕರು, ದೊಡ್ಡ ಹಾಗೂ ಮಧ್ಯಮ ಬಂಡವಾಳಗಾರರು, ದೊಡ್ಡ ವರ್ತಕರು, ಕಂಟ್ರಾಕ್ಟರುಗಳು, ಹಿರಿಯ ಅಧಿಕಾರಿಗಳು ಹಾಗೂ ವರ್ಣಾಶ್ರಮ ಧರ್ಮವನ್ನೆತ್ತಿ ಹಿಡಿಯುವ ಮಠಾಧಿಪತಿಗಳು ಈ ದುರ್ಬಲವರ್ಗಗಳ ಮರುಹೊಂದಾಣಿಕೆಯ ಶತ್ರುಪಾಳೆಯದವರು. ಈ ಶಿಬಿರಗಳ ನಡುವೆ ಸರ್ವತೋಮುಖವಾದ ಮುಖಾಮುಖಿ, ಸಂಘಟಿತ ಹೋರಾಟ ಅನಿವಾರ್ಯ.

ಕಾರ್ಲ್ ಮಾರ್ಕ್ಸ್ ಹೇಳುವಂತೆ, ರಾಜ್ಯವು ವರ್ಗವೈರುಧ್ಯಗಳ ಅಸಂಗತಿಯಾಗಿದೆ ಮತ್ತು ರಾಜ್ಯವು ಒಂದು ವರ್ಗ ಮತ್ತೊಂದು ವರ್ಗದ ಮೇಲೆ ಅಧಿಪತ್ಯ ನಡೆಸುವ ಮರ್ದನ ಸಾಧನವಾಗಿರುತ್ತದೆ. ಅದು ಸಾಮಾನ್ಯವಾಗಿ ಅತ್ಯಂತ ಪ್ರಬಲವಾದ ಆರ್ಥಿಕ ಮೇಲುಗೈ ಪಡೆದ ವರ್ಗದ ರಾಜ್ಯವಾಗಿರುತ್ತದೆ. ಆ ವರ್ಗವು ರಾಜ್ಯದ ಮಾಧ್ಯಮದ ಮೂಲಕ ರಾಜಕೀಯವಾಗಿ ಮೇಲುಗೈ ಪಡೆದ ವರ್ಗವಾಗುತ್ತದೆ. ರಾಜ್ಯದ ಮೂಲಕ ಆಳುವ ವರ್ಗ ಮರ್ದಿತವರ್ಗಗಳನ್ನು ಹತ್ತಿಕ್ಕುವ ಹಾಗೂ ಶೋಷಿಸುವ ಹೊಸ ಸಾಧನಗಳನ್ನು ಪಡೆದುಕೊಳ್ಳುತ್ತದೆ. ನಮ್ಮ ದೇಶದಲ್ಲಿ ಪಾರ್ಲಿಮೆಂಟರೀ ಪ್ರಾತಿನಿಧಿಕ ರಾಜ್ಯಪದ್ಧತಿಯ ಮೂಲಕ ಆಳುವವರ್ಗಗಳು ಶೋಷಿತವರ್ಗಗಳನ್ನು ಮರ್ದಿಸಲು ಮತ್ತು ಮೆಟ್ಟಿನಿಲ್ಲಲು CPC ಮತ್ತು CRPE ಮುಂತಾದ ಸಾಧನಗಳನ್ನು ಪಡೆದಿವೆ. ಇವೆಲ್ಲ ಸಾಲದೆಂಬತೆ-ಸುಗ್ರೀವಾಜ್ಞೆಗಳ ಮುಂಖಾಂತರ ತುರ್ತುಪರಿಸ್ಥಿತಿ, ಅಂತರಿಕ ರಕ್ಷಣಾಶಾಸನ ಮುಂತಾದ ಅನೇಕ ಶಾಸನಗಳನ್ನು ನಿರ್ಮಿಸಿ ಶಾಸನ ಸಭೆಗಳ ಬೆಂಬಲ ಮತ್ತು ಒಪ್ಪಿಗೆಯನ್ನು ಪಡೆದು ಚಳವಳಿಗಳನ್ನು ಹತ್ತಿಕ್ಕುತ್ತಿವೆ. ವರ್ಗ ಮತ್ತು ವರ್ಣದ ವಿರುದ್ಧ ಹೋರಾಟ ಅಸಕ್ತಿತದ ಬುನಾದಿಯನ್ನು ಸಡಿಲಿಸಬಹುದೆಂಬ ಕಾರಣದಿಂದ ಅಧ್ಯಕ್ಷೀಯ ಪದ್ಧತಿಯ ಆಳ್ವಿಕೆಯ ಪರವಾಗಿ ಆಳುವವರ್ಗ ಹುಯಿಲೆಬ್ಬಿಸುತ್ತಿದೆ. ಅಧಿಕಾರ ಸಂಪೂರ್ಣ ಕೇಂದ್ರೀಕೃತವಾಗಿರಬೇಕೆಂಬುದು ಅವರ ಅಭಿಪ್ರಾಯ. ವರ್ಗ ವರ್ಣದ ಬಗ್ಗೆ ನಡೆಯುವ ಯಾವುದೇ 'ನಿಜವಾದ' ಹೋರಾಟವನ್ನು ಈಗಿರುವ ಸಮಾಜ ವ್ಯವಸ್ಥೆ ಒಪ್ಪುವುದಿಲ್ಲ. ಆದ್ದರಿಂದ ನಮ್ಮ ಸಿದ್ಧಾಂತಕ್ಕಾಗಿ ವಿಕೇಂದ್ರೀಕೃತ ಸಮಾಜವಾದೀ ಪ್ರಜಾಸತ್ತೆಗಾಗಿ ನಾವು ಹೋರಾಡುವುದು ಅನಿವಾರ್ಯ.

# ಗೊಡ್ಡು ಎಡ ರಾಜಕಾರಣಿಗಳು

—ಗೌತಮ್ ಅಧಿಕಾರಿ

ನಮ್ಮ ದೇಶದ ಅಸಹಾಯಕ ಎಡ ಪಕ್ಷಗಳನ್ನು ನೋಡುವಾಗ, ಕ್ರಾಂತಿಯೆಂಬ ಸಿಂಹಸ್ವಪ್ನ ಈ ದೇಶವನ್ನು ನಡುಗಿಸುತ್ತಿದೆ ಎನ್ನುವಂತಾಗಿದ್ದರೆ ಎಷ್ಟು ಚೆನ್ನಾಗಿತ್ತು ಎಂದೆನಿಸುತ್ತದೆ. ಆದರೆ ಈ ಸಿಂಹಸ್ವಪ್ನ ಮಾತ್ರ ನಮಗೆ ಸಧ್ಯಕ್ಕೆ ಬೀಳುತ್ತಿಲ್ಲ.

ಕ್ರಾಂತಿಯ ಹಿನ್ನೆಲೆಯಲ್ಲಿ ಬರುವ ಎಲ್ಲ ಭಯಾನಕತೆಗಳೂ - ಆಹಾರದ ಕೊರತೆ. ಗಲಭೆಗಳು, ಅಂಧಕಾರ, ಅಸ್ತವ್ಯಸ್ಥತೆ, ತುರ್ತು ಪರಿಸ್ಥಿತಿ-ಜನತೆಯ ಮುಂದೆ ನರ್ತಿಸುತ್ತಿರುವ ಕ್ಷಣಗಳಲ್ಲು ನಮ್ಮ ಸಂಪ್ರದಾಯ ಬದ್ಧ ಎಡ ಪಕ್ಷಗಳು ಹಿಂದೀ ನೆಲದಲ್ಲಿ ತಮ್ಮ ಪ್ರಭಾವ ಬೆಳಿಸುವ ಸಲುವಾಗಿ ಚುನಾವಣಾ ಹೊಂದಾಣಿಕೆಯ ಭರಾಟೆಯಲ್ಲಿ, ಎಡ ಮತ್ತು ಪ್ರಜಾಪ್ರಭುತ್ವ ಶಕ್ತಿಗಳ ಬೀಗತನದಲ್ಲಿ, ಅಫ್ಘಾನಿಸ್ತಾನ್, ಕಂಪೂಚಿಯ, ಮಹಾನ್ ಶ್ರಮಜೀವಿ ವರ್ಗದ ಒಲಿಂಪಿಕ್ಸ್, ಕಲ್ಕತ್ತಾ ಸಾಕರ್ ಇತ್ಯಾದಿ ಗಂಭೀರ ಚರ್ಚೆಯಲ್ಲಿ ತೊಡಗಿವೆ.

ಭಾರತದ ಈಗಿನ ಪರಿಸ್ಥಿತಿಯ ಬಗ್ಗೆ ಒಂದು ಪುಸ್ತಕ ಬರೆಯುವುದಾದರೆ ಚಾರ್ಲ್ಸ್ ಡಿಕನ್ಸ್‌ನ ತರಹ ಪ್ರಾರಂಭಿಸಬಹುದು. "ಇದು ಅತ್ಯಂತ ಉತ್ತಮ ಸಮಯ, ಇದು ಅತ್ಯಂತ ಕೆಟ್ಟ ಸಮಯ. ದೆಹಲಿಯ ಸಿಂಹಾಸನದಲ್ಲಿ ಸುಂದರ ಮುಖದ ರಾಣಿ ಕುಳಿತಿದ್ದಾಳೆ ..." ಆದರೆ ನಮ್ಮ ಎಡ ಪಕ್ಷಗಳ ನಾಯಕರು ಇದನ್ನು ಓದಿಯಾರೇ? ಇಲ್ಲ. ಅವರಿಗೆ ಪ್ರೋಗ್ರೆಸ್ ಪಬ್ಲಿಷರ್ಸ್ ಅಚ್ಚು ಮಾಡಿರುವ ಅವರ ಪಾಂಡಿತ್ಯ ಗ್ರಂಥಗಳು ಸಾಕು. ಅವು ಅವರಿಗೆ ಸೀಟುಗಳ ಹೊಂದಾಣಿಕೆ ಈ ಗಳಿಗೆಯ ಅಗತ್ಯ ಎಂದು ಕಲಿಸಿವೆ.

ಬಹುಶಃ ಇದಕ್ಕಿಂಥ ಹೆಚ್ಚಾದ ಯಾವುದನ್ನೋ ಅವರಿಂದ ನಿರೀಕ್ಷಿಸುವುದು ತಪ್ಪು ಕಲ್ಪನೆಯಾಗಬಹುದು. ಹೆಚ್ಚಾಗಿ ಮಧ್ಯಮ ವರ್ಗದಿಂದ ಬಂದಿರುವ ಎಡ ಪಕ್ಷಗಳ ನಾಯಕರಿಗೆ ಅವರು ಅಧಿಕಾರದಲ್ಲಿ (ಇದು ಸಣ್ಣ ಪಕ್ಷಗಳಲ್ಲಿನ ಅಧಿಕಾರ ಆಗಿರಬಹುದು) ಕ್ಷೇಮವಾಗಿ ನೆಲಸಿರುವುದರ ಬಗ್ಗೆ ಸರಿಯಾದ ತಿಳುವಳಿಕೆ ಇದೆ. ಇದಕ್ಕೆ ಅವರು ಪ್ರಜಾತಂತ್ರವಾದಿ ಕೇಂದ್ರೀಕರಣಕ್ಕೆ ಋಣಿಯಾಗಿರಬೇಕು. ಕೇವಲ

---

ಈ ಲೇಖನ ಶೂದ್ರದ ಅಭಿಪ್ರಾಯವಲ್ಲ. ಎಡರಾಜಕಾರಣದ ಬಗ್ಗೆ ವಿವಿಧ ಅಭಿಪ್ರಾಯಗಳನ್ನು ನಮ್ಮ ಓದುಗರಿಗೆ ಕೊಡುವ ಉದ್ದೇಶದಿಂದ ಪ್ರಕಟಿಸಿದ್ದೇವೆ. ಸಂ:

8·5% ಓಟನ್ನು ಅಥವಾ ಓಟು ಮಾಡುವ ಮನಸುಳ್ಳವರ ಬೆಂಬಲ ಪಡೆದಿರುವ ಕೇವಲ ಛಿದ್ರಗೊಂಡ, ಕ್ರಾಂತಿಯ ಸೋಂಕಿಲ್ಲದ ಆರ್ಥಿಕ ಹೋರಾಟಗಳನ್ನು ನಡೆಸುವ ಕಾರ್ಮಿಕ ಸಂಘಟನೆಗಳ ಈಡಾಗಿ ಮತ್ತು ಇದೇ ದೇಶದ ಶೋಷಿತ ವರ್ಗವನ್ನು ಬಿಟ್ಟು ಕೆಲವೇ ಜನರನ್ನು ಪ್ರತಿನಿಧಿಸುವ. ಜಾತಿ ಪದ್ಧತಿಯಿಂದ ಬಳಲುತ್ತಿರುವ ಬಹುಪಾಲು ಪ್ರದೇಶದ ಅಸಂಖ್ಯ ಜನ ಎಡ ರಾಜಕೀಯ ಪ್ರಜ್ಞೆಯಿಂದ ದೂರವಿರುವ (ಮಾಸ್ಕೊ ಪೀಕಿಂಗ್‌ನಿಂದ ಎಷ್ಟು ದೂರವಿದೆಯೋ ಅಷ್ಟು), ಈ ದೇಶದ ಜಮೀನುದಾರಿ ಬಂಡವಾಳಶಾಹಿ ಪದ್ಧತಿಗಳು ಬೆಳೆಸಿರುವ ಅಸಹ್ಯ ಪರಿಸರದಲ್ಲಿ ಒಂದೆರಡು ರಾಜ್ಯಗಳಲ್ಲಿ ದಕ್ಷ ಆಡಳಿತ ಕೊಡುತ್ತಿದ್ದೇವೆಂದು ಬೆನ್ನು ತಟ್ಟಿಕೊಳ್ಳುವ, ಸಂಕೋಚದ ಸರಕಾರ ನಡೆಸುತ್ತಿರುವ ಈ ಪರಿಸ್ಥಿತಿಯಲ್ಲಿ–ಇದಕ್ಕೂ ಕೆಟ್ಟ ಭವಿಷ್ಯವಿರುವಾಗ ಈ ಎಡ ಪಕ್ಷಗಳ ಗೊಡ್ಡು ನಾಯಕರು ಇನ್ನೇನು ಮಾಡಿಯಾರು ?

ಉತ್ತಮ ಆರ್ಥಿಕ ಕುಟುಂಬಗಳಿಂದ ಬಂದ ಈ ನಾಯಕರು ಎಡ ರಾಜಕೀಯ ವನ್ನು ಕಲಿತದ್ದು ಸುಸಂಸ್ಕೃತ ಇಂಗ್ಲೆಂಡಿನಲ್ಲಿ. ಆಗ ಸಮಾಜವಾದೀ ಗುಂಪು ಒಂದು ದೊಡ್ಡ ಹಾಗೂ ಸಂತೃಪ್ತ ಕುಟುಂಬದಂತಿತ್ತು. ಜೋಸೆಫ್ ಸ್ಟಾಲಿನ್ ಚುಕ್ಕಾಣಿ ಹಿಡಿದು ಅಧಿಕಾರ ನಡೆಸುತ್ತಿದ್ದ. ಗೊಂದಲ ಹುಟ್ಟಿಸುವಷ್ಟು ಸರಳೀಕರಿಸಿ ಬರೆದ ಪಾಂಪ್ಲೆಟ್ ಮೂಲಕ ಗತಿತಾರ್ಕಿಕ ಭೌತವಾದವನ್ನು ಇವರಿಗೆ ಕಲಿಸಿದ ; ಜಗತ್ತಿನಲ್ಲಿ ಎಲ್ಲವೂ ಸರಿಯಾಗಿದೆ ಅಥವಾ ಎಲ್ಲವೂ ಬೇಗನೆ ಸರಿ ಹೋಗುತ್ತದೆ. ಪಕ್ಷಗಳೂ ತಮ್ಮ ಗೂಡಿನಲ್ಲಿ ಇಂಟರ್‌ನ್ಯಾಶನಲ್ ಕ್ರಾಂತಿಗೀತೆ ಹಾಡುತ್ತಿರುತ್ತವೆ.

ಕೆಲವು ವರ್ಷಗಳಲ್ಲಿ ಎಲ್ಲವೂ ಬದಲಾದವು. ಸ್ಟಾಲಿನ್ ಸತ್ತ. ಈ ಜಾರ್ಜಿ ಯನ್ನನ ಹೆಣದಲ್ಲಿ ಡ್ರಾಕುಲಾನ ಪ್ರತಿರೂಪವನ್ನು ಕಂಡರು. 1956 ರಲ್ಲಿ ನಡೆದ ಹಂಗೇರಿಯ ಘಟನೆ– ಇದನ್ನು ಬ್ರೆಜ್ನೇವ್ ತನ್ನ ಅತಿಬುದ್ಧಿವಂತಿಕೆಯಿಂದ ತಿಪ್ಪೆ ಸಾರಿಸಿದ. ನಂತರ ಮಾವೋ ಮತ್ತು ಅವನ ಅಪ್ವಂಚರಿಸಂ. 1968 ರಲ್ಲಿ ಪ್ರಾಗ್‌ದ (Prague) ಬೀದಿಗಳಲ್ಲಿ ನುಗ್ಗಿದ ಸೋವಿಯತ್ ಟ್ಯಾಂಕುಗಳು ಅಲೆಕ್ಸಾಂಡರ್ ಡ್ಯೂಬ್‌ಚೆಕ್‌ನನ್ನೂ ನೆಲಸಮ ಮಾಡಿತು.

ಚೀನಿಯರಿಗೆ ಈಗ ಸೋವಿಯತ್ ಒಕ್ಕೂಟ ಒಂದು ಸಮಾಜವಾದಿ ಸಾಮ್ರಾಜ್ಯ ಶಾಹಿಯಾಗಿ ಕಂಡಿದೆ. ಅಮೆರಿಕ ಮತ್ತು ಫ್ರಾನ್ಸ್‌ನ ಎರಡು ಸಾಮ್ರಾಜ್ಯಶಾಹಿ ಶಕ್ತಿ ಗಳ ವಿರುದ್ಧ ಮಹಾನ್ ಹೋರಾಟ ನಡೆಸಿದ ವಿಯಟ್ನಾಂ, ಕಂಪೂಚಿಯಾ ಜನತೆಯನ್ನು ಮಾರ್ಕ್ಸಿಸ್ಟ್ ಪಾಲ್‌ಪಾಟ್‌ನ ದೈತ್ಯ ಹಿಡಿತದಿಂದ ಪಾರು ಮಾಡಲು ಹೊರಟರೆ, ಚೀನಾ ಮಾರ್ಕ್ಸ್‌ನ ದುಃಸ್ವಪ್ನದಲ್ಲೂ ಕೂಡ ನೆನಸಲಾರದಂಥ ಮಾರ್ಕ್ಸಿಸಂನ ಪಾಠ ವಿಯೆಟ್ನಾಂಗೆ ಕಲಿಸಬೇಕು ಎಂದು ತೀರ್ಮಾನಿಸಿತು. ಅಲ್ಲದೆ ಚೀನಾಕ್ಕೆ ಸೋವಿಯತ್

ರಷ್ಯಾ ಪ್ರಪಂಚದ ಶಾಂತಿಗೆ, ಸಮಾಜವಾದಕ್ಕೆ ಮಾರಕವಾಗಿ ಕಂಡು ಅಮೆರಿಕದೊಡನೆ ಸ್ನೇಹ ಬೆಳಸಿತು. ಅಂತರರಾಷ್ಟ್ರೀಯ ಎಡರಾಜಕೀಯ ಸಂಪೂರ್ಣವಾಗಿ ಸೋತು ಹೋಯಿತು.

ಈ ಬೆಳವಣಿಗೆಯಲ್ಲಿ ಭಾರತದ ಎಡ ಪಕ್ಷಗಳ ನಾಯಕರು ಎಲ್ಲೋ ತಮ್ಮ ದಿಕ್ಕನ್ನೇ ಕಳೆದುಕೊಂಡಿದ್ದಾರೆ. ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಘಟನೆಗಳು ಇವರನ್ನು ಹಿಂದೆ ಹಾಕಿ ಬಹಳ ಮುಂದೆ ಹೋಗಿಬಿಟ್ಟಿವೆ. ಏನು ಮಾಡಬೇಕೆಂದು ಹೇಳುತ್ತಿದ್ದ ಸ್ಟಾಲಿನ್ ಕೂಡ ಇಲ್ಲ. ಇಂತಹ ಪರಿಸ್ಥಿತಿಯಲ್ಲಿ ಎಲ್ಲ ಎಡ ಪಕ್ಷಗಳೂ ಒಂದುಗೂಡುವ ಬದಲು, ತಮ್ಮ ಮುಖ ಉಳಿಸಿಕೊಳ್ಳುವ ನೆವದಲ್ಲಿ ಇವರು ಛಿದ್ರವಾಗಿ ಮತ್ತೆ ಮತ್ತೆ ಛಿದ್ರವಾಗುತ್ತಲೆ ನಡೆದಿದ್ದಾರೆ. ಚರ್ಚೆಗಳ ಮೂಲಕ ಒಮ್ಮತಕ್ಕೆ ಬಂದು ಎಡಪಕ್ಷಗಳ ಒಂದುಗೂಡುವಿಕೆಗಿಂತ, ಈ ಮಧ್ಯಮ ವರ್ಗದ ನಾಯಕರಿಗೆ ತಾತ್ವಿಕ ಸಿದ್ಧಾಂತದ ಕೂದಲೆಳೆ ಕತ್ತರಿಸುವುದೇ ಮಹತ್ತರ ಕೆಲಸವಾಗಿದೆ. ಎಡ ವಿರೋಧೀ ಜನಗಳಿಗಂತೂ ಎಂಥ ಖುಷಿ !

ಭಾರತೀಯ ಕಮ್ಯುನಿಷ್ಟ್ ಪಕ್ಷವನ್ನೇ ತೆಗೆದುಕೊಳ್ಳಿ. ಪಶ್ಚಿಮ ಬಂಗಾಳದಲ್ಲಿ ಡಾಂಗೆ ಪರಗುಂಪು ಪಕ್ಷದಿಂದ ಒಡೆದು ತನ್ನದೇ ಒಂದು ಪಕ್ಷವನ್ನು ಸಾರಿದೆ (All India Communist Party). ಕಲ್ಕತ್ತಾ ಪತ್ರಿಕೆಯ ಒಬ್ಬ ಪತ್ರಕರ್ತ ಇದರ ಬಗ್ಗೆ ಬರೆಯುತ್ತಾ, ಈ ಪಕ್ಷವನ್ನು ಸೇರುವುದು ರೋಜಾ ದೇಶಪಾಂಡೆಯ ಬಾಲಕ್ಕೆ ಅಂಟಿಕೊಂಡಂತೆ ಎಂದಿದ್ದಾರೆ. ಇನ್ನೂ ನೇರವಾಗಿ ಹೇಳಬೇಕೆಂದರೆ ಇಂದಿರಾ ಗಾಂಧಿಯ ಬಾಲಕ್ಕೆ ಅಂಟಿಕೊಂಡಂತೆ. ಸಿ.ಪಿ.ಐ.ನ ಪ್ರಸ್ತುತ ನಾಯಕರು ಸಿ.ಪಿ.ಐ.(ಎಂ) ನೊಂದಿಗೆ ವಿಲೀನಗೊಳಿಸಲು ಬದ್ಧರಾಗಿದ್ದಾರೆಂದು ತಿರುಗಿಬಿದ್ದ ಗುಂಪಿನವರಿಂದ ಆಕ್ಷೇಪಣೆ. ಈ ಗುಂಪಿನ ವಖ್ತಾರರೊಬ್ಬರು ಹೇಳಿದ್ದು. "ನಮ್ಮ ಪಕ್ಷದ ನಾಯಕರು ಅಳವಡಿಸುತ್ತಿರುವ ರೀತಿ ನಿಜಕ್ಕೂ ನಮ್ಮ ಘನತೆಗೆ ಕುಂದು ತರುವಂತಹುದು, ರಾಜ್ಯದ ರಾಜಕೀಯದಲ್ಲಿ ನಮ್ಮ ಪಕ್ಷ ಅಪ್ರಸ್ತುತವಾಗುವಂತೆ ಮಾಡಿ ಸಿ.ಪಿ.ಐ.(ಎಂ) ನೊಂದಿಗೆ ವಿಲೀನಗೊಳಿಸುವುದು ಇವರಯತ್ನ" ಕಮ್ಯೂನಿಷ್ಟ್ ಪಕ್ಷಗಳನ್ನು ಒಂದು ಮಾಡುವುದಕ್ಕಿಂತ ಅವಮಾನಕರವಾದ ಸಂಗತಿ ಇನ್ನೇನು ಇದ್ದೀತು !

ನಮ್ಮ ತಾಯ್ನಾಡನ್ನು ರಕ್ಷಿಸಲು ದೇಶದ ಎಲ್ಲ ದೇಶಾಭಿಮಾನಿ ಶಕ್ತಿಗಳೂ ಒಂದುಗೂಡಬೇಕೆಂದು A.I.C.P. ನಾಯಕರ ಅಭಿಪ್ರಾಯ. ಇವರಿಗೆ ಸಿ.ಪಿ.ಐ(ಎಂ) ನಲ್ಲಿರುವ ಚೀನಾ ಪರ ಕೆಲವರು ದೇಶಾಭಿಮಾನಿಗಳಲ್ಲ. ಒಂದು ಪ್ರಶ್ನೆಗೆ ಉತ್ತರ ಕೊಡುತ್ತ ಈ ಗುಂಪಿನ ವಖ್ತಾರ ಹೇಳಿದ. ಯಾರು ಸೋವಿಯತ್ ಒಕ್ಕೂಟವನ್ನು ತಮ್ಮ ಶತೃವೆಂದು, ಮತ್ತು ಚೀನಾವನ್ನು ಮಿತ್ರರೆಂದು ಪರಿಗಣಿಸುತ್ತಾರೊ ಹಾಗೂ

ಭಾರತ-ಚೀನಾ ಮೈತ್ರಿ-ಸಂಘಗಳಲ್ಲಿ ಇತ್ತೀಚೆಗೆ ಮಾತನಾಡಿದ್ದಾರೊ. ಅವರಿಂದ ಈ ದೇಶದ ಭದ್ರತೆಗೆ ಅಪಾಯ ಎಂದು. ಇತ್ತೀಚೆಗೆ ಚೀನಾದಿಂದ ನಿಯೋಗ ಒಂದು ಬಂದಿತ್ತು. ಈ ಸಂಬಂಧ ಏರ್ಪಡಿಸಿದ ಇಂತಹ ಸಭೆಗಳಲ್ಲಿ ಮಾತನಾಡಿದವರು ಸಿ.ಪಿ.ಐ(ಎಂ)ನ ಉನ್ನತ ನಾಯಕರುಗಳಾದ ಜ್ಯೋತಿ ಬಸು ಮತ್ತು ಪ್ರಮೋದ್‌ದಾಸ್ ಗುಪ್ತ. ಸಿ.ಪಿ.ಐ(ಎಂ)ನ್ನು ಹೊರಗಿಟ್ಟು ಕಾಂಗ್ರೆಸ್ಸಿನೊಡಗೂಡಿ ದೇಶಾಭಿಮಾನಿಗಳಾಗುವುದು AICP ನಾಯಕರ ಹವಣಿಕೆ.

ಡಾಂಗೆ ಗುಂಪಿನವರು ಎಡ ರಾಜಕಾರಣದಿಂದಲೇ ನಿರ್ಗಮಿಸುವ ಪರಿಸ್ಥಿತಿಯಲ್ಲಿ ಎರಡೂ ಕಮ್ಯುನಿಷ್ಟ್ ಪಕ್ಷಗಳು [C.P.I. ಮತ್ತು C.P.I.(M)] ಹೆಚ್ಚು ಸಮೀಪ ಅಥವಾ ಮತ್ತೆ ಒಂದುಗೂಡಿ ಕೆಲಸ ಮಾಡುವ ಸಾಧ್ಯತೆ ಇದೆಯೆಂದು ಕೆಲವು ರಾಜಕೀಯ ಪಂಡಿತರ ಹೇಳಿಕೆ. ಹೀಗೇನಾದರೂ ಆದರೆ ಅದು ಮಾಸ್ಕೊ ಈಗ ಜಗಳದ ವಸ್ತುವಲ್ಲವಾದ್ದರಿಂದ ಸಾಧ್ಯವಾಗಬಹುದು. ಆಗ ಮಾಸ್ಕೊಗೆ ಮೂರು ಅನುವರ್ತಿಗಳು ಭಾರತದಲ್ಲಿ ದೊರೆಯುತ್ತಾರೆ: 1) A.I.C.P. 2) ಒಂದುಗೂಡಿದ ಸಿ.ಪಿ.ಐ. ಮತ್ತು ಸಿ.ಪಿ.ಐ.(ಎಂ) ಅಥವಾ ಅವರ ಮೈತ್ರಿಕೂಟ ಮತ್ತು 3) ಇಂದಿರಾಗಾಂಧಿಯವರ ಪಕ್ಷವೆಂದು ಕೆಲವು ಸಿನಿಕರು ಅಭಿಪ್ರಾಯ ಪಡುತ್ತಾರೆ. ಸಿ.ಪಿ.ಐ.(ಎಂ) ತನ್ನ ಬಿಡೆಯನ್ನು ಬಿಡುವುದಾದಲ್ಲಿ ಇಂದಿರಾಗಾಂಧಿಯವರೊಡನೆ ಕೆಲವು ಕಾರ್ಯಕ್ರಮಗಳಲ್ಲಿ ಹೊಂದಾಣಿಕೆಯಾಗುವುದು ಅಸಾಧ್ಯವೇನಲ್ಲ.

ಜೆಕೊಸ್ಲೊವಾಕಿಯಾದಿಂದ ಶುರುವಾಗಿ, ಕಂಪೂಚಿಯ, ಅಫ್ಘಾನಿಸ್ಥಾನ್ ಇತ್ಯಾದಿ ಅಂತರ್‌ರಾಷ್ಟ್ರೀಯ ವಿವಾದಾಸ್ಪದ ಘಟನೆಗಳಿಗೆ ಸಿ.ಪಿ.ಐ.(ಎಂ) ರಷ್ಯಾಕ್ಕೆ ತನ ಸಂಪೂರ್ಣ ಬೆಂಬಲ ಕೊಟ್ಟಿದೆ ನಿಜ, ಪಶ್ಚಿಮ ಬಂಗಾಳದ ಹಾಗೂ ಇತರ ಕೆಲವು ಪ್ರದೇಶದಲ್ಲಿ ಸುಮಾರು ಸಂಖ್ಯೆಯಲ್ಲಿ ಸಿ.ಪಿ.ಐ.(ಎಂ)ನ ಕಾರ್ಯಕರ್ತರು ಮಾಸ್ಕೊನಿಂದ ದೂರ ಉಳಿಯುವಂತೆ, ಅಥವಾ ಚೀನಾಕ್ಕೆ ಹೆಚ್ಚು ಸಮೀಪವಾಗಿರುವಂತೆ ತನ್ನದೇ ಆದ ರಾಷ್ಟ್ರೀಯ ಧೋರಣೆಯನ್ನು ಹೊಂದಿರಬೇಕೆಂದು ಪಕ್ಷದ ನಾಯಕರುಗಳಿಗೆ ಆಗ್ರಹ ಪಡಿಸುತ್ತಿದ್ದಾರೆ. ಸೋವಿಯತ್ ಒಕ್ಕೂಟಕ್ಕೆ ಬೆಂಬಲಿಸುವ ಮುಂಚೆ, ಈ ಅಭಿಪ್ರಾಯ ಹೊಂದಿರುವ ಗುಂಪನ್ನು ಶಾಂತಗೊಳಿಸುವುದು ಸಿ.ಪಿ.ಐ.(ಎಂ)ನ ನಾಯಕರಿಗೆ ತುಂಬಾ ಮುಖ್ಯ.

ಈ ದೇಶಕ್ಕೆ ಅನ್ವಯವಾಗುವಂತಹ ಎಡ ನಿಲುವುಗಳನ್ನು ತೆಗೆದುಕೊಳ್ಳಬೇಕೆಂದು ಬಯಸುವವರ ಹಾದಿಯೇನೊ ಸುಗಮವಾಗಿಲ್ಲ. ತಾತ್ವಿಕವಾಗಿ ಮತ್ತು ಭೌತಿಕವಾಗಿ ಮೈತ್ರಿ ಸಂಬಂಧಗಳು ತುಂಬಾ ಲಾಭದಾಯಕ. ತಾತ್ವಿಕವಾಗಿ ಏಕೆಂದರೆ ಈ ದೇಶದ ಕಮ್ಯುನಿಷ್ಟರು ಸ್ವಾತಂತ್ರ್ಯ ಸಮರ, ಎರಡನೇ ಮಹಾಯುದ್ಧ, ಅಥವಾ ಭಾರತದ

ಆಳುವ ವರ್ಗದ ಗುಣ, ಭಾರತದ ಸಮಾಜ, ರಾಜ್ಯಶಕ್ತಿ ಮುಂತಾದ ವಿಷಯಗಳಲ್ಲಿ ಈವರೆಗೂ ಸ್ವಂತ ಆಲೋಚನೆ ಮಾಡಿಲ್ಲ. ಇಂಥ ವಿಷಯಗಳಲ್ಲಿ ಹೇಗೆ ಆಲೋಚಿಸ ಬೇಕೆಂದು ಮಾಸ್ಕೊ ಅಥವಾ ಪೀಕಿಂಗ್ ಮೇಲೆ ಅವಲಂಬಿಸಿರುತ್ತದೆ

ಎಂ. ಎನ್. ರಾಯ್ ಬಹುಶಃ ಈ ರೀತಿಯ ಕಮ್ಯುನಿಷ್ಟ್ ನಾಯಕರಿಗೊಂದು ಅಪವಾದವಾಗಿದ್ದವರಲ್ಲಿ ಕೊನೆಯವರು. ಚಾರು ಮಜುಂದಾರ್ ಅವರ "ಚೀನಾದ ಅಧ್ಯಕ್ಷ ನಮ್ಮ ಅಧ್ಯಕ್ಷ" ಎಂಬ ತಾತ್ವಿಕ ಜೋಕನ್ನು ಬಿಟ್ಟರೆ, ಅವರ ಸ್ಫೂರ್ತಿದಾಯಕ ಕ್ರಾಂತಿಕರೆ ಹೆಚ್ಚು ಸಮಂಜಸವಾಗಿತ್ತು. ನಾಗಿರೆಡ್ಡಿ ಇನ್ನೊಬ್ಬ ಅಪರೂಪದ ನಾಯಕ ಆದರೆ ಅವನಲ್ಲಿ ಲೆನಿನ್, ಮಾವೊ, ಮತ್ತು ಗಾಂಧಿಯವರಿಗಿದ್ದಂಥ ಭಾತಿ ಇತ್ತೊ ಇಲ್ಲವೊ ಎಂಬುದನ್ನು ಕಂಡುಕೊಳ್ಳಲಾಗಲಿಲ್ಲ.

ಮೈತ್ರಿ ಸಂಬಂಧದ ಭೌತಿಕ ಲಾಭಗಳು ಬಹಳ ಸ್ಪಷ್ಟ. ಮಾಸ್ಕೊ ಯಾತ್ರೆ, ಹಾಗೆಯೇ ಆಗಾಗ ಇತರ ದೇಶಗಳ ಭೇಟಿ, ರಷ್ಯಾದ ಸಣ್ಣ ಪುಟ್ಟ ನಾಯಕರುಗಳ ಪವಿತ್ರ ದರ್ಶನ, ಂತರ್ ರಾಷ್ಟ್ರೀಯ ಯುವ ಸಮ್ಮೇಳನ–ಎಲ್ಲವೂ ಅಮೇರಿಕದಲ್ಲಿ ನಡೆದಷ್ಟೇ ಚೆಂದ.

ಈ ದೇಶದ ಅತ್ಯಂತ ಬಿಕ್ಕಟ್ಟಿನ ಸಮಯದಲ್ಲಿ ಕೂಡ ಒಂದು ರೀತಿಯ ನಿಗೂಢತೆ ಯನ್ನು ನಮ್ಮ ಎಡನಾಯಕರಲ್ಲಿ ಕಾಣಬಹುದು. ದೇಶದಲ್ಲಿ ಮೂಲಭೂತ ಬದ ಲಾವಣೆಗಾಗಿ–ಅಥವಾ ಕ್ರಾಂತಿಗಾಗಿ ಹೆಚ್ಚು ನಿಯಮಿತವಾಗಿ ಜನರನ್ನು ಸಂಘಟಿಸ ಬೇಕಾದ ಅವಶ್ಯಕತೆಯಿರುವ ಪರಿಸ್ಥಿತಿಯಲ್ಲಿ ನೀವೇನು ಮಾಡುತ್ತಿರುವಿರಿ ಎಂದು ಪ್ರಶ್ನಿಸಿದರೆ—ಗೊಡೋ ಬಂದೇ ಬರುತ್ತಾನೆ. ಇತಿಹಾಸ ಮತ್ತು ಐತಿಹಾಸಿಕ ಭೌತ ವಾದ ಇದನ್ನು ತೋಂಡಿಯಲ್ಲಿ ಅಪ್ಪಣೆ ಕೊಡಿಸಿದೆ. ನೀವು ಸಹನೆಯಿಂದ ಇರಬೇಕು ಎಂದು ಯಾತನೆಯಾಗುವಷ್ಟು ಜಾಣ ಉತ್ತರ ಕೊಡುತ್ತಾರೆ. ಇನ್ನೇನಾದರೂ ಹೆಚ್ಚು ಪ್ರಶ್ನಿಸಿದರೆ, ಇಂಡೋನೇಸಿಯಾ, ಚಿಲಿಯ ಅಲಂಡೆ ಮತ್ತಿತರ ಉದಾಹರಣೆಗಳನ್ನು ಇತಿಹಾಸದಿಂದ ಹೆಕ್ಕಿ ಅಸಹನೆಯಿಂದಾಗುವ ದುರಂತ ಸಮಾನಾಂತರಗಳನ್ನು ನಮ್ಮ ಮುಂದೆ ಮಂಡಿಸುತ್ತಾರೆ.

ಈ ಮಧ್ಯದಲ್ಲಿ ಸಮಸ್ಯೆಗಳನ್ನು ಬಗೆಹರಿಸುವಂತಹ ಮಹಾಪುರಷರಿಗಾಗಿ ದೇಶದಲ್ಲಿ ಹುಡುಕಾಟ ನಡೆದಿದೆ. ವಿಷಾದದ ಸಂಗತಿ ಎಂದರೆ ಮಹಾಪುರುಷರು ಸಾಯುತ್ತಿದ್ದಾರೆ. ಹೊಸನಾಯಕರು ಬರುವುದೇ ಕಷ್ಟವಾಗಿದೆ.

[ತಾ. 10–9–80ರ Hindu ಪತ್ರಿಕೆಯಲ್ಲಿ ಪ್ರಕಟವಾದ ಗೌತಮ್ ಅಧಿಕಾರಿ ಅವರ "The Hopless Left Leaders" ಎಂಬ ಲೇಖನದ ಅನುವಾದವನ್ನು ಗುರುಮೂರ್ತಿ ಹೆಗ್ಗಡೆ ಮಾಡಿದ್ದಾರೆ.]

# ಭಗವದ್ಗೀತೆ ಹಾಗೂ ಅಪರಾಧ ಮತ್ತು ಶಿಕ್ಷೆ

—ಎಸ್. ವೆಂಕಟರಾವ್

ವ್ಯಾಸ ರಚಿಸಿದನೆಂದು ನಂಬಲಾಗಿರುವ ಭಗವದ್ಗೀತೆ ಒಂದು ಪ್ರವಚನ. ದೋಸ್ತೋವಸ್ಕಿಯ ಅಪರಾಧ ಮತ್ತು ಶಿಕ್ಷೆ ಒಂದು ಕಾದಂಬರಿ. ಒಂದು, ಎರಡು ಸಾವಿರದ ಐನೂರು ವರುಷದಷ್ಟು ಪ್ರಾಚೀನ ಭಾರತೀಯ ದಾರ್ಶನಿಕ ಗ್ರಂಥ. ಇನ್ನೊಂದು, ನೂರು ವರುಷದಷ್ಟು ಈಚೆಗಿನ ರಷ್ಯನ್ ಸಾಹಿತ್ಯ ಕೃತಿ. ಈ ಎರಡರ ಕಥಾಸಂದರ್ಭಗಳೂ ಸಂಪೂರ್ಣವಾಗಿ ಬೇರೆ ಬೇರೆ. ಆದರೆ ಈ ಎರಡೂ ಕೃತಿಗಳೂ ಶೋಧಿಸುವ ಮೂಲ ಸಾಮಗ್ರಿ ಒಂದು ಆಧ್ಯಾತ್ಮಿಕ ತರ್ಕ.

ಭಗವದ್ಗೀತೆ ಕುರುಕ್ಷೇತ್ರದಲ್ಲಿ ಕಿಂಕರ್ತವ್ಯಮೂಢನಾದ ಕ್ಷತ್ರಿಯನೊಬ್ಬನಿಗೆ ಆ ಯುದ್ಧದ ಸೂತ್ರಧಾರ ಮಾಡಿದ ಉಪದೇಶ. ಸೂತೆಯ ನಡುವೆ ನಿಂತು ಹೇಳಿದ ತತ್ವ. ಯುದ್ಧ ಸನ್ನದ್ಧರಾದ ಯೋಧರು, ಅವರು ಕೈಯಲ್ಲಿ ಹಿಡಿದ್ಧ ಮಾರಕ ಶಸ್ತ್ರಾಸ್ತ್ರಗಳು, ಯೋಧರ ಶಂಖನಾದ, ಕೊಂಬು, ಡೋಲು, ಮದ್ದಲೆಗಳ ನಿನಾದ, ಕುದುರೆಗಳ ಹೇಷಾರವ, ಇಂಥ ಸನ್ನಿವೇಶದಲ್ಲಿ ಯುದ್ಧ ಆರಂಭವಾಗಲಿರುವ ಮುನ್ನ ಆರ್ಜುನ ಸಾರಥಿ ಕೃಷ್ಣನಿಗೆ ಹೀಗೆ ಕೇಳಿಕೊಳ್ಳುತ್ತಾನೆ :

ಧೃತರಾಷ್ಟ್ರನ ದುಷ್ಟ ಸಂತಾನದ ಅಣತಿಯಂತೆ ಯುದ್ಧಮಾಡಲು
ಸನ್ನದ್ಧರಾಗಿ ನಿಂತಿರುವ, ನಾನು ಯಾರೊಡನೆ ಹೋರಾಡಬೇಕಾ

ದಿ॥ ವೆಂಕಟರಾಮ್‌ರವರು ನನಗೆ ಈ ಲೇಖನ ಕೊಟ್ಟಾಗ: ಇದರ ಬಗ್ಗೆ ಒಂದಷ್ಟು ಚರ್ಚೆಯಾಗಲಿ ಎಂಬ ಆಶಯವನ್ನು ಹೊಂದಿದ್ದರು. ಆದರೆ ಈಗ ಅವರು ನಮ್ಮನ್ನೆಲ್ಲ ತೊರೆದು ಹೋಗಿದ್ದಾರೆ. ಆದರೆ ಅವರನ್ನ ಅರಿತವರಿಗೆ ಅವರ ನೆನಪು ಎಷ್ಟು ಗಾಢ ವಾದದ್ದು ಅನಿಸುತ್ತೆ. ಭಗವದ್ಗೀತೆ ಅನ್ನೋ ಮಿಥ್‌ಗೂ ವೆಂಕಟರಾಂರವರ ಪ್ರೀತಿ ಯೆನ್ನುವ ಮಿಥ್‌ಗೂ ಎಷ್ಟು ಸಮೀಕರಣವಿದೆ ಅನ್ನಿಸುತ್ತೆ. ದಯವಿಟ್ಟು ಈ ಲೇಖನದ ಪ್ರತಿಕ್ರಿಯೆ ಕಳಿಸಿ.

ಸಂ :

ಗಿದೆಯೋ ಅಂಥ ನನ್ನ ಶತ್ರುಗಳನ್ನು ನಾನು ನೋಡಬೇಕು. ನನ್ನ ರಥವನ್ನು ಅಲ್ಲಿಗೆ ಒಯ್ದು ನಿಲ್ಲಿಸು.

ಕೃಷ್ಣ ಎರಡು ಪಾಳಯಗಳ ನಡುವೆ ರಥವನ್ನು ನಿಲ್ಲಿಸುತ್ತಾನೆ. ಅರ್ಜುನ ಅಲ್ಲಿ ಉಭಯ ಶಿಬಿರಗಳಲ್ಲಿಯೂ ಹಂಚಿಹೋಗಿ ಪರಸ್ಪರ ಕೊಲ್ಲಲು ಸಿದ್ಧರಾಗಿ ನಿಂತಿದ್ದ ಬಂಧು ಬಾಂಧವರು, ಮಿತ್ರರು, ಗುರುಗಳನ್ನು ಪರಮ ವಿಷಾದದಿಂದ, ಕರುಣೆಯಿಂದ ನೋಡುತ್ತಾನೆ. ಇದು ಭಗವದ್ಗೀತೆಯ ದೃಶ್ಯ ಶ್ರಾವ್ಯ ಸಂದರ್ಭ.

ಚಿಕ್ಕಂದಿನಿಂದಲೂ ಯುದ್ಧದ ಸಂಸ್ಕಾರ ಪಡೆದಿದ್ದ ಕ್ಷತ್ರಿಯನಾದ ಅರ್ಜುನನಿಗೆ ಧರ್ಮ ಸಂದಿಗ್ಧ ಹುಟ್ಟುತ್ತದೆ. ಅಲ್ಲಿಂದ ಮುಂದೆ ಮಹಾಭಾರತದ ಯುದ್ಧದ ವರದಿಗಾರನಾದ ಸಂಜಯನ ಮುಖಾಂತರ ಪ್ರಸಿದ್ಧ ಕೃಷ್ಣಾರ್ಜುನ ಸಂವಾದ ಬಿಚ್ಚಿ ಕೊಳ್ಳುತ್ತದೆ. ಅರ್ಜುನ ತನ್ನ ಅಳಲನ್ನು ಹೀಗೆ ತೋಡಿಕೊಳ್ಳುತ್ತಾನೆ:

> ನನ್ನ ಬಂಧು ಬಾಂಧವರನ್ನು ಇಲ್ಲಿ ಕಂಡಾಗ ನನ್ನ ಕೈಕಾಲು ಸೋಲುತ್ತವೆ. ಬಾಯಿ ಒಣಗುತ್ತದೆ. ಮೈ ನಡುಗುತ್ತದೆ. ಕೂದಲು ನಿಮಿರುತ್ತದೆ. ಚರ್ಮ ಉರಿಯುತ್ತದೆ. ಗಾಂಢೀವ ಕೈಯಿಂದ ಜಾರುತ್ತದೆ... ಹೀಗೆ ಬಂಧು ಬಾಂಧವರನ್ನು ಕೊಲ್ಲುವುದರಿಂದ ಏನನ್ನು ತಾನೇ ಆಶಿಸಬಹುದು? ............ಇದು ಸೋತವರನ್ನು ಅಧೋಗತಿಗಿಳಿಸಿ, ಗೆದ್ದವರನ್ನು ಶಾಪಗ್ರಸ್ತರನ್ನಾಗಿ ಮಾಡುತ್ತದೆ........ನಾನು ಮಾಡ ಹೊರಟಿರುವುದು ಏನು? ಮಹಾಪಾಪಕರವಾದ ಸ್ವಜನ ಹತ್ಯೆ. ನಾನಷ್ಟು ಸ್ವಾರ್ಥಿಯೇ? ನಾನು ಅವರನ್ನು ಕೊಲ್ಲುವುದಿಲ್ಲ. ಅವರೇ ನನ್ನನ್ನು ಕೊಲ್ಲಲಿ. ಅದೇ ಉತ್ತಮ. ಈ ಲೋಕದ ರಾಜ್ಯವಾಗಲೀ, ದೇವಲೋಕದ ಸಿಂಹಾಸನವಾಗಲೀ, ಈ ವ್ಯಥೆಯನ್ನು ನಿವಾರಿಸಲಾರದು.

ಇಷ್ಟು ಹೇಳಿ ಹೃದಯದಲ್ಲಿ ವ್ಯಥೆ ತುಂಬಿ ಕಣ್ಣಿನಲ್ಲಿ ನೀರು ತುಂಬಿ ತನ್ನ ಬಿಲ್ಲು ಬಾಣಗಳನ್ನು ಕೆಳಗೆಸೆದು ರಥದ ಪೀಠದ ಮೇಲೆ ಅರ್ಜುನ ಕುಳಿತುಬಿಟ್ಟ. ಈ ಸನ್ನಿವೇಶದಲ್ಲಿ ಅರ್ಜುನ ಏನು ಮಾಡಬೇಕು? ಅಥವಾ ಇಂಥ ಯಾವುದೇ ಸನ್ನಿವೇಶದಲ್ಲಿ ಯಾರಾದರೂ ಏನು ಮಾಡಬೇಕು?

ಇಲ್ಲಿಂದ ಮುಂದೆ ಶ್ರೀಕೃಷ್ಣನ ವ್ಯಕ್ತಿತ್ವ ಪೂರ್ಣವಾಗಿ ಪರಿಸ್ಥಿತಿಯನ್ನೂ ಸಂವಾದವನ್ನೂ ತನ್ನ ಹತೋಟಿಗೆ ತೆಗೆದುಕೊಳ್ಳುತ್ತದೆ. ಅವನ ವಾಕ್ಪ್ರವಾಹ' ವ್ಯಕ್ತಿತ್ವದ ಅಧಿಕಾರಯುತ ಶೈಲಿ, ದಾರ್ಶನಿಕ ಪಾಂಡಿತ್ಯದೆದುರಿಗೆ ಅರ್ಜುನನ ತರ್ಕ

ಶಕ್ತಿ ಚಿಂತನ ಸಾಮರ್ಥ್ಯ ನಿಧಾನವಾಗಿ ಕರಗಿ ಹೋಗುತ್ತದೆ. ಅತ್ಯಂತ ಮಾನವೀಯ ಸಂದಿಗ್ಧಕ್ಕೆ ಖುದ್ದು ಭೂಮಿಗಿಳಿದು ಬಂದ ಭಗವಂತ ಅಧಿಕಾರವಾಣಿಯಿಂದ ಸಮಾಧಾನ ಸೂಚಿಸುತ್ತಾನೆ. ಅವನ ಸಮಾಧಾನದ ಧಾಟಿ :

> ನಿನಗೆ ಇಂಥ ಹೃದಯ ದೌರ್ಬಲ್ಯ ಸಲ್ಲದು. ನಾನು ಅಜರಾಮರ, ಎಲ್ಲ ಜೀವರಾಶಿಗಳ ಪ್ರಭು. ಧರ್ಮಗ್ಲಾನಿಯಾದಾಗಲೆಲ್ಲ ನಾನು ಬಂದು ದುಷ್ಟ ಶಿಕ್ಷಣ, ಶಿಷ್ಟ ರಕ್ಷಣೆ ಮಾಡುತ್ತೇನೆ. ನನ್ನ ಪ್ರಕೃತಿಯ ಮೂಲಕವೇ ನಾನು ಜಗತ್ತಿನ ಸೃಷ್ಟಿ, ಪ್ರಳಯಗಳ ಕರ್ತ. ನನ್ನ ರೂಪ ಸ್ವಭಾವ ಅರಿತವನು ಜೀವನ್ಮುಕ್ತ. ನನ್ನನ್ನು ಆರಾಧಿಸುವವನ ಇಷ್ಟಾರ್ಥಗಳನ್ನು ನಾನು ಪೂರೈಸುತ್ತೇನೆ. ಚಾತುರ್ವರ್ಣ್ಯದ ಕರ್ತನಾದ ನಾನು ಎಲ್ಲ ಕತ್ತಲನ್ನೂ ನಿವಾರಿಸುವ ಜ್ಯೋತಿಯಂತಹ ಅರಿವು. ಈ ಜನರೆಲ್ಲ ನನ್ನಿಂದಲೇ ಹತರಾಗಿದ್ದಾರೆ. ನೀನು ನಿಮಿತ್ತ ಮಾತ್ರ. ಕ್ಷತ್ರಿಯನಾದ ನಿನಗೆ ಈ ಯುದ್ಧ ಧರ್ಮಸಮ್ಮತ

ಮನುಷ್ಯನ ಚಿಂತನೆ ಸಾರಾಸಾರ ವಿಚಾರ, ನಿರ್ಧಾರಕ್ಕೆ ಇಲ್ಲಿ ಏನೇನೂ ಮಹತ್ವವಿಲ್ಲ, ಅವನು ನಿಮಿತ್ತ ಮಾತ್ರ. ಪ್ರವಚನದ ಎಲ್ಲ ತಿರುವು ಮುರುವುಗಳ ಮುಖ್ಯ ಧಾರೆ, ನಾನು ಎಂಬ ಈ ಧ್ವನಿ. ಆಧುನಿಕ ಕಾಲದಲ್ಲಿ ಈ ಧಾಟಿಯಲ್ಲಿ ಯಾರಾದರೂ ಮಾತನಾಡಿದರೆ ಆತನಿಗೆ ಮ್ಯಾಗಲೋಮ್ಯಾನಿಯ ಇದೆ–ಎನ್ನುತ್ತಾರೆ ಕಡೆಗೆ ಈ ರಭಸದಿಂಗ ಬಚಾವಾಗಿ ಏನಾದರೂ ಕೋಮಲವಾದ ಹೂವಿನಂತೆಯೊ, ಮೊಳಕೆಯಂತೆಯೋ ಕಿಂಚಿತ್ತಾದರೂ ಮಾನವ ಸಹಜವಾದ ವಿಚಾರಶಕ್ತಿ ಉಳಿದಿದ್ದರೆ ಅದನ್ನು ನಿರ್ನಾಮಗೊಳಿಸಿದ್ದು 'ವಿಶ್ವರೂಪ' ದರ್ಶನದ ದಳ್ಳುರಿ.

> ಕೋಟಿ ಸೂರ್ಯ ಸಮಪ್ರಭವಾದ ಅಂಸಖ್ಯ ಮುಖಗಳ ಅಂಗಾಂಗಗಳ ಸಹಿತವಾದ ಅಭರಣ ಖಚಿತವಾದ ವಿಶ್ವರೂಪವನ್ನು ಅರ್ಜುನ ಕಂಡ. ಅದನ್ನು ಕಾಣಲು ದಿವ್ಯದೃಷ್ಟಿ ಬೇಕಾಯಿತು. ಅದನ್ನು ಶ್ರೀಕೃಷ್ಣ ಅರ್ಜುನನಿಗೆ ನೀಡಿದ.

ಅಲ್ಲಿಗೆ ಮಾನವ ದೃಷ್ಟಿ, ಮಾನವ ಸಂವಾದ ಅಂತ್ಯ. ವ್ಯಕ್ತಿಯ ವಿಚಾರ ಶಕ್ತಿಗೆ ಇದು ಕಡೆಯ ಪ್ರಹಾರ. ತಾರ್ಕಿಕವಾಗಿ ಮಾತು ಪ್ರಾರಂಭಿಸಿದ ಕೃಷ್ಣ ಇಲ್ಲಿ ಸರ್ವಶಕ್ತನಾಗಿ ಮಾತು ಮುಗಿಸುತ್ತಾನೆ. ಅರ್ಜುನ ಹೀಗೆನ್ನುತ್ತಾನೆ :

> ಅಜಾಗ್ರತನಾಗಿ ನಿನ್ನನ್ನು ಕೃಷ್ಣ, ಸಂಗಾತಿ ಎಂದು ಕರೆದೆ. ಅಮರನಾದ ದೇವನನ್ನು ಮಿತ್ರ, ನರನೆಂದು ಬಗೆದೆ. ಕ್ಷಮಿಸು, ಪ್ರಭು. ನಿನ್ನ

ದಯೆಯಿಂದ ನನ್ನ ಭ್ರಾಂತಿ ನಿರ್ಮೂಲವಾಯಿತು. ನನ್ನ ಮನಸ್ಸು ನಿರ್ಧಾರವಾಗಿದೆ. ಆದರ ಅನುಮಾನಗಳು ತೀರಿವೆ, ನಿನ್ನ ಆಜ್ಞೆ ನಾನು ಪಾಲಿಸುತ್ತೇನೆ.

ಧರ್ಮಸಂದಿಗ್ಧದಿಂದ ವಿಷಣ್ಣನಾಗಿದ್ದ ಅರ್ಜುನ ಈಗ ಸ್ಪಷ್ಟ ಮನಸ್ಸಿನಿಂದ ಕ್ರಿಯೆಗೆ ತೊಡಗುತ್ತಾನೆ. ಅವನ ವಿಷಾದ ಹಾಗೂ ಕರುಣೆ ಕರಗಿಹೋಗಿದೆ. ಒಂದು ಮಹದೋದ್ದೇಶಕ್ಕಾಗಿ ಅವನಿಗೆ ಕೊಲೆ ಮಾಡುವ ಹಕ್ಕು ಇದೆ ಎಂಬ ನಂಬಿಕೆ ಬಂದಿದೆ. ಆದುದರಿಂದ ಈ ಕ್ರಿಯೆ ಪ್ರಜ್ಞಾಪೂರ್ವಕವಾದ, ಪೂರ್ವ ನಿಯೋಜಿತವಾದ ಯುದ್ಧವೆಂಬ ಹೆಸರಿನ ಸಾಮೂಹಿಕ ಕೊಲೆ. ಇದರ ಉದ್ದೇಶ ರಾಜ್ಯ ಸಂಪತ್ತು, ಬಂಧು ಬಾಂಧವರ ಕೊಲೆ ಸಹಿತ ಯುದ್ಧದ ಅನಂತ ಅಪರಾಧಗಳೂ ನೈತಿವಾಗಿ ಸಿಂಧು, ಸಮರ್ಥನೀಯ. ಹಾಗೆಂದು ಎಲ್ಲ ತಿಳಿದವನಾದ ಎಲ್ಲಕ್ಕೂ ಕಾರಣ ಕರ್ತನಾದ ಅತಿಮಾನವನಾದ ಕೃಷ್ಣ ಹೇಳುತ್ತಾನೆ. ಅರ್ಜುನ ಕೃಷ್ಣನ ಉದ್ದೇಶಗಳ ಸಾಧನ, ನಿಮಿತ್ತ ಮಾತ್ರ. ಅರ್ಜುನ ಈ ಹೊಸ ದೃಷ್ಟಿಯನ್ನು ಮನಸಾರೆ ಒಪ್ಪಿದ್ದಾನೆ. ಉದ್ದೇಶ ಶುದ್ಧವಾದುದಾದರೆ, ಕಳಬಹುದು, ಕೊಲಬಹುದು, ಹುಸಿಯ ನುಡಿಯಲುಬಹುದು ತನ್ನ ಬಣ್ಣಿಸಬಹುದು, ತುಂಬಾ ಪರಿಚಿತ ಸಿದ್ಧಾಂತ.

ಮೂಲತಃ ಇದಕ್ಕೆ ತದ್ವಿರುದ್ಧವಾದ ಘಟನಾಚಕ್ರ ಹಾಗೂ ತರ್ಕಚಕ್ರದೊಸ್ತೋವಸ್ಕಿಯ 'ಅಪರಾಧ ಮತ್ತು ಶಿಕ್ಷೆ'ಯದು. ಅದರ ಕಥಾ ನಾಯಕ ರಾಸ್ಕೋಲ್ನಿಕೋವ್ ಸಾಮಂತ ವರ್ಗಮೂಲದ ಆದರೆ ಇಂದು ಅಹನ್ಯಹನಿ ಕಾಲಕ್ಷೇಪ ಮಾಡುತ್ತಿರುವ ನಿರ್ಗತಿಕ ವಿದ್ಯಾರ್ಥಿ. ಮದುವೆಯಾಗಲು ಪ್ರಾಪ್ತ ವಯಸ್ಕಳಾದ ಆದರೆ ಬಡತನದ ಕಾರಣದಿಂದ ಅನುರೂಪನಾದ ವರನನ್ನು ಪಡೆಯಲಾರದೆ ರಾಸ್ಕೊಲ್ನಿಕೋವನ ಅಭ್ಯುದಯದ ಸಲುವಾಗಿ ಅಪರವಯಸ್ಸಿನ ಉದ್ಧಟ ಶ್ರೀಮಂತನೊಬ್ಬನನ್ನು ಮದುವೆಯಾಗಲೊಪ್ಪಿರುವ ಅವನ ಸೋದರಿ. ಅವನಿಗಾಗಿ ಏನು ತ್ಯಾಗ ಮಾಡಲೂ ಸಿದ್ಧವಿರುವ ಆದರೆ ಅಸಹಾಯಕಳಾದ ವಾತ್ಸಲ್ಯಮಯಿ ತಾಯಿ ಅವನ ಆಪ್ತರು :

ರಾಸ್ಕೋಲ್ನಿಕೊವನ ಪ್ರಖರ ಆದರ್ಶಶೀಲ ಬುದ್ಧಿ ಒಂದು ಸಿದ್ಧಾಂತವನ್ನು ಕುರಿತು ಚಿಂತಿಸುತ್ತಿರುತ್ತದೆ. ಅವನು ಇದರ ಬಗ್ಗೆ ಒಂದು ಲೇಖನವನ್ನು ಬರಿದಿರುತ್ತಾನೆ ಕೂಡ.

"ಜಗತ್ತಿನಲ್ಲಿ ಎರಡು ವರ್ಗದ ಜನ : ನಿಯಮಾತೀತರಾದ ಅತಿ ಮಾನವರು. ನಿಯಮ ಪಾಲಕರಾದ ಮಾನವರು. ಮಹಾಪುರುಷರು ಮಹತೋದ್ದೇಶಕ್ಕಾಗಿ ಏನಾದರೂ ಮಾಡಬಹುದು, ಕಳಬಹುದು,

ಡಂಗೂರ

ನಿನ್ನ
ಒಪ್ಪಿಗೆಯ

ಅ
ಪ್ಪ
ಗೆ
ನನ್ನ
ಹೃದಯದ

ಡಂ
ಗೂ
ರ

ಚಂಚಲೆ

ಹೆಣ್ಣೆ...
ನಿನ್ನ
ಹೃ
ದ
ಯವೆಂಬ ಪದಕ್ಕೆ

ಅ
ರ್ಥ
ಕೋ
ಶವನ್ನು ತಡಕಾಡಿದರೆ
ಸಿಕ್ಕೀತೆ...!?

—ವಿ. ಪಿ. ಜಯಲಕ್ಷ್ಮಿ

## ಪ್ರಜಾ - ಸತ್ತಾ

ಹುಟ್ಟಿದ ನಾಕs ದಿವಸದಾಗs
ನಮ್ಮ ಎಮ್ಮೀ
ಕರಾ ಸತ್ತು ಹೋಗೇತಿ
ಎದರಿಗೆ ಕರಾ ಇಲದಿರಕ
ಹಾಲ ಹಿಂಡೂದುಲ್ಲ-ಅಂತ
ಸತ್ತ
ಕರದ ಹೊಟ್ಯಾಗ
ಹುಲ್ಲು ತುಂಬಿ
ಗೊಂಬಿ
ಮಾಡಿ ಎದರಿಗೆ ಇಟ್ಟೇವಿ
ಅದರ ಮೈ ನೆಕ್ಕೊಂತ
ಎಮ್ಮಿ
ಸುಮ್ಮಕs ಹಿಂಡೇ-
ಹಿಂಡತೆತಿ.

—ಧರಣೇಂದ್ರ ಕುರಕುರಿ

## ಕೂಡಲ ಸಂಗ

1

ಮುಟ್ಟುವುದಕ್ಕೂ ಕಡೆಗೆ
ಊಹಿಸಲ್ಲ ಭಯಪಟ್ಟ

ಅಪರೂಪದ
ರೂಪಕ್ಕೆ

ಮನದಲ್ಲಿ ರತಿಹುಟ್ಟಿ
ಕೊಟ್ಟ

ಕ್ಷಣ
ವಿಶವಾಯಿತುಂ ಪ್ರಾಣ

"ಸುಖ ಕ್ಷಣಿಕ
ನಿತ್ಯ ನರಕ

ಮರುಳಾಗಬೇಡ
ಮರುಳೆ
ಮಾಯೆಂಗೆ
ಕುರುಡಾಗಬೇಡ"

ಅಪ್ಪಣೆಕೊಟ್ಟ ಗೃಹಸ್ಥ
ತಿಳಿವಳಿಕಸ್ಥ

ಅಯ್ಯಾ
ನೀನುಭವಗೆದ್ದವ
ಭವಿಯಲ್ಲಿ ನನ್ನಂತೆ
ನಿನಗೇಕೆ ಚಿಂತೆ ?
ತೊಡಕಲ್ಲ ನನಗೆ
ಕಾಮಲತೆ

2

ಕಾಮಂದುರಿ ನೋಟಕ್ಕೆ
ಕರಗಿತು
ಅರಗಿನ ಪುತ್ಥಳಿ
ಬಯುಸಿದರಗಿಳಿ
ಕರಗಿತು
ನನ್ನ ಅಂಗ ಸಂಗಕ್ಕೆ

ಕರಗಿ
ಕಣ್ಣಲ್ಲಿ
ಮನದಲ್ಲಿ
ಕಡೆಗೆ ತನುವಲ್ಲಿ

ಅಯ್ಯಾ
ನಾನೀಗ
ಕೂಡಲ ಸಂಗಯ್ಯನಯ್ಯ.

—ಶ್ರೀಕೃಷ್ಣ ಆಲನಹಳ್ಳಿ

# ಒಳನೋಟ

## ನನ್ನ ಮಟ್ಟಿಗೆ ಸಾಮಾಜಿಕ ಜವಾಬ್ದಾರಿ ಅನ್ನೋದು...

—ಬಿ. ಎಸ್. ನಾಗರತ್ನ

ಶ್ರೀಮತಿಯರಾದ ವೆಂಕಟಲಕ್ಷ್ಮಿ ಹಾಗೂ ವಿಜಯಾರವರ ಲೇಖನದ ಅಂಶಗಳನ್ನು ಪ್ರೋಷಿಸುವುದು ಅಥವಾ ಟೀಕಿಸುವುದು ಇಲ್ಲಿ ಪ್ರತಿಕ್ರಿಯಿಸುವುದರ ಉದ್ದೇಶವಲ್ಲ. ಆದರೆ ಅವರು ಹೇಳಿದ್ದಕ್ಕೆ ನಾನೇನು ಹೇಳಬಲ್ಲೆನೆಂಬುದೇ ಇಲ್ಲಿನ ವಿಷಯ.

ನನ್ನ ಮಟ್ಟಿಗೆ ಹೇಳುವುದಾದರೆ 'ಜವಾಬ್ದಾರಿ' ಅನ್ನುವ ಪದವೇ ವ್ಯಕ್ತಿಗತವಾದದ್ದಲ್ಲ. ಅದು ಸಾಂಪ್ರದಾಯಿಕವಾದದ್ದೂ ಅಲ್ಲ, ಅದೊಂದು ಸಾಮಾಜಿಕ ಸಂಸ್ಕೃತಿಯ ಸಂಬಂಧದಲ್ಲಿ genuine ಮತ್ತು intellectual ಅಂತ ನನ್ನ ಅನಿಸಿಕೆ. ಅಂದರೆ ಮೂಲಭೂತವಾಗಿ ಇದೊಂದು ರೀತಿಯ ನಮ್ಮ ಒಳ್ಳೆತನಕ್ಕೆ ನಾವು ಮಾಡಿಕೊಂಡಂಥ ಹೊಣೆಗಾರಿಕೆ.

'ಜವಾಬ್ದಾರಿ' ಅನ್ನೋದು ವ್ಯಕ್ತಿವ್ಯಕ್ತಿಗಳ ಮಧ್ಯೆ ಅವರ ಹೊಂದಾಣಿಕೆಗೆ ಅನುಕೂಲವಾಗುವಂಥ ಸಂಬಂಧ. ಯಾವುದೋ ಒಂದು ಕಾರಣಕ್ಕೆ ಜಗಳವಾಡಿಯೋ ಅಥವಾ ಮುನಿಸಿಕೊಂಡೋ ಭಾರಿ ಆತ್ಮೀಯರೊಬ್ಬರನ್ನ ದೂರಮಾಡಿಕೊಂಡಾಗ ನಾವು 'Feel' ಮಾಡಿಕೋತ್ತೇವೆ. ಅಂಥ ಸಂದರ್ಭದಲ್ಲಿ ನಾವು ಮನುಷ್ಯತ್ವ ಕಳಕೊಂಡಿದ್ದೀವಿ ಅಂತಲೋ, ಹೊಣೆಯಿಲ್ಲದ ಕೆಲಸ ಮಾಡಿದೀವಿ ಅಂತಲೋ ಅಂದುಕೋತೇವೆ. ಬಹುಶಃ ಜವಾಬ್ದಾರಿ ಅನ್ನೋದು ಇಂಥ ಪ್ರೀತಿ-ಸ್ನೇಹ-ವಿಶ್ವಾಸಗಳ ಮೇಲೆ ನೆಲೆಸಿದ ಸಮಾಜದ Cementing factor ಅನ್ನಬಹುದು.

ನನಗನಿಸುವಂತೆ 'ಜವಾಬ್ದಾರಿ' ಅನ್ನೋದು ಒಂದರ್ಥದಲ್ಲಿ ಪ್ರಾಮಾಣಿಕತೆ-ಸತ್ಯ-ಧರ್ಮ-ದೇವರುಗಳನ್ನೂ ಮೀರಿದ್ದು. ಮನುಷ್ಯ ಬದುಕಲಿಕ್ಕೇ ಹುಟ್ಟಿರುವುದರಿಂದ ಆ ಬದುಕೋ ಹಕ್ಕನ್ನು ಉಳಿಸಿರೋದು 'ಜವಾಬ್ದಾರಿ'. ಒಬ್ಬ ಮನುಷ್ಯ ದೇವರು-ಧರ್ಮ-ಜಾತಿ ಬಿಟ್ಟು ಬದುಕಬಹುದು. ಆದರೆ ಜವಾಬ್ದಾರಿಯಿಲ್ಲದ ಜೀವನ ಅಧ್ವಾನ. ಹೆಣ್ಣು ಮದುವೆಯಾದ ಮೇಲೆ ಗಂಡನ ಹೇಳಿಕೆಯಂತೆಯೇ ಕೇಳಬೇಕೆಂಬುದಾಗಲೀ, ಗಂಡನನ್ನ ನೋಡಿಕೊಳ್ಳುವುದಾಗಲೀ. ಅವನ ಮರ್ಯಾದೆ ಕಾಪಾಡುವುದಾಗಲೀ, ಏನೇ ಆದರೂ ಗಂಡನೊಟ್ಟಿಗೆ ಹೊಂದಿಕೊಂಡು ಹೋಗಬೇಕೆನ್ನುವುದಾಗಲೀ ಖಂಡಿತ ಜವಾಬ್ದಾರಿಯಲ್ಲ. ಜವಾಬ್ದಾರಿ ಅನ್ನುವುದು ಹೆಣ್ಣು-ಗಂಡು ಇಬ್ಬರಿಗೂ ಅನ್ವಯಿಸುವಂಥದು.

ದುರ್ದೈವದ ಸಂಗತಿಯೆಂದರೆ ಇಲ್ಲಿಯವರೆಗೂ ಸಮಾಜ ಗಂಡು-ಹೆಣ್ಣನ್ನ ಪ್ರತ್ಯೇಕಿಸಿ ಅವರಿಬ್ಬರಿಗೂ ವಿಧಿಸಿದ ಕೆಲವು ಕೆಲಸಗಳನ್ನೇ ಸಾಮಾಜಿಕ ಜವಾಬ್ದಾರಿ ಎಂದು ಭ್ರಮಿಸಿರುವುದು. ಅವು ಸಾಮಾಜಿಕ ಜವಾಬ್ದಾರಿಯಲ್ಲ; ಸಮಾಜ ಹೇರಿಟ್ಟ ಧಾರ್ಮಿಕ ತತ್ವಗಳ ಹೊರೆ ಅಷ್ಟೆ! ಒಂದು ಸಮಾಜದ ಜೀವಿ ಅಥವಾ ಒಂದು ವ್ಯವಸ್ಥೆಯ ಘಟಕವಾದ ದುರಂತಕ್ಕಾಗಿ ಆ ಸಮಾಜದ ನೀತಿ ನಿಯಮಗಳನ್ನೇ ತಮ್ಮ ನೀತಿನಿಯಮಗಳೆಂದು ಆರೋಪಿಸಿಕೊಂಡು ಬದುಕುವ ಕೃತಕತೆಯೇ ಇಂದಿನ ಬಹುಪಾಲು ಮಧ್ಯಮ ವರ್ಗದ ಹೆಣ್ಣುಮಕ್ಕಳ ಪಾಡು. ನಮ್ಮ ಸಮಾಜದಲ್ಲಿ ಅವರೊಂದು ಸ್ಥಿತಿಗೆ ಒಗ್ಗಿದರೆಂದರೆ ಅದರಿಂದ ಮುಂದೆ ಹೋಗಿ ಬೇರೊಂದನ್ನು ಕಾಣುವ ಅವಶ್ಯಕತೆಯೇ ಅವರಿಗೆ ಬೇಕಾಗುವುದಿಲ್ಲ. ಪರಂಪರೆ ಅಥವಾ ಪರಿಸರ ಸೃಷ್ಟಿಸಿಕೊಟ್ಟ ಪರಿಮಿತಿಯಲ್ಲೇ ಅವರು ಆನಂದವನ್ನೂ ಅದ್ವಿತೀಯತೆಯನ್ನೂ ಕಾಣುತ್ತಾರಲ್ಲದೆ ಮತ್ತೊಂದು ಹೊಸ ಬದುಕನ್ನು ಕಂಡುಕೊಳ್ಳಲಾರದ ಅವರ ಪರಿಮಿತತೆಯೇ ಅವರ ಗುಣವಾಗಿ ಬದುಕು-ಸಾವಿನ ಪ್ರಶ್ನೆಯಾಗಿದೆ. ನೀರಿನಿಂದ ಹೊರಕ್ಕೆ ಬಂದರೆ ಹೇಗೋ ಅನ್ನುವ ಭಯಪ್ರಜ್ಞೆಯ ಏಡಿಯಂತೆ ಇದ್ದುದರಲ್ಲೇ 'Cool' ಆಗಿ ಇರಬಯಸುತ್ತಾರೆ. ಇಂಥ ಪರಿಸ್ಥಿತಿಯಲ್ಲಿ ಅಂಥ ಹೆಣ್ಣು ತನಗೂ 'ಸಾಮಾಜಿಕ ಜವಾಬ್ದಾರಿ'ಗಳಿವೆ ಅನ್ನುವ ಭ್ರಮಾತ್ಮಕ ವಾಸ್ತವತೆಯಲ್ಲೇ ಇರುತ್ತಾಳೆ! ●

## ಸಾಮಾಜಿಕ ಜವಾಬ್ದಾರಿ ?

—ವಿ. ಆರ್. ಪ್ರತಿಭಾ

ಮದ್ರಾಸಿನಲ್ಲಿ ಕುಳಿತು ಮಹಿಳೆ-ಸಾಮಾಜಿಕ ಜವಾಬ್ದಾರಿ - ವೆಂಕಟಲಕ್ಷ್ಮಿ-ವಿಜಯರವರ ಚಿಂತನೆ ಇತ್ಯಾದಿಗಳನ್ನೇ ಕುರಿತು ಯೋಚಿಸುತ್ತಾ ಟಿ. ವಿ. ಹಾಕಿದೆ.

ನಾಟಕ ಬರುತ್ತಿತ್ತು. ತಂದೆ ಬಡವ ಎನ್ನುವ ಕಾರಣದಿಂದ ಮಗಳ ಮದುವೆ ಆಗು ತ್ತಿಲ್ಲ. ಕೊನೆಗೆ ಒಬ್ಬ ಮುದುಕ ಪುರೋಹಿತನಿಗೆ ಅವಳನ್ನು ಕೊಟ್ಟು ಮದುವೆ ಮಾಡುತ್ತಾನೆ. ಮುದಿ ವಯಸ್ಸಿನಲ್ಲಿ ಅವನಿಗೆ ಕೈಕಾಲು ಒತ್ತುವುದಕ್ಕೆ, ಅಡಿಗೆ ಮಾಡಿ ಹಾಕುವುದಕ್ಕೆ ಒಬ್ಬಳು ಇರಲಿ ಎನ್ನುವ ಕಾರಣಕ್ಕೆ ಮುದುಕ ಮದುವೆ ಯಾಗುತ್ತಾನೆ. ಇದೇ ಮೊದಲ ಬಾರಿಯಲ್ಲಿ ಈ ರೀತಿಯ ನಾಟಕ ಟಿ. ವಿ. ಯಲ್ಲಿ ಪ್ರದರ್ಶಿತವಾದದ್ದು. ವಿದ್ಯಾವಂತ ಆಫೀಸಿಗೆ ಹೋಗುವ ಹೆಣ್ಣುಗಳಿಗೆ ಬಹಳ ಧಿಮಾಕು. ಅವರಿಗೆ ಬುದ್ಧಿ ಬಂದು ಮನೆಗೆಲಸಕ್ಕೆ ತೊಡಗಿದಾಗ ಅವರೇ 'ಸರಿದಾರಿಗೆ' ಬಂದಂತೆ ಎಂದು ಚಿತ್ರಿಸುವ ನಾಟಕಗಳೂ ಅನೇಕವು ಬಂದಿವೆ.

'ಶೂದ್ರ' ಓದುವ ಮಹಿಳೆಯರು ಎಷ್ಟು? ಅದರಲ್ಲೂ ಇಂತಹ ಲೇಖನ ಮಾಲೆಯನ್ನು ಓದಿ ಪ್ರಭಾವಿತರಾಗುವವರು ಎಷ್ಟು? ಸರಕಾರದ ಸಾರ್ವಜನಿಕ ಮಾಧ್ಯಮಗಳಲ್ಲೇ ಇನ್ನೂ ಹೆಂಗಸರು ಮನೆಯಲ್ಲಿರುವುದು ಶೋಭೆ ಎನ್ನುವ ಧೋರಣೆ ಪ್ರಸಾರಗೊಂಡರೆ 'ಸಾಮಾಜಿಕ ಜವಾಬ್ದಾರಿ' ಎನ್ನುವ ವಿಚಾರವನ್ನು ಕುರಿತು ಆಲೋಚಿಸಲು ಹೆಂಗಸರಿಗೆ ಅವಕಾಶ ಎಲ್ಲಿದೆ? ಬ್ಯಾಂಕ್ ಜಾಹೀರಾತು ಗಳಲ್ಲಿ 'ಮಗಳ ಮದುವೆಗೆ ವರದಕ್ಷಿಣೆ' 'ಮಗನ ಓದಿಗೆ' ಹಣ ಉಳಿಸಿ ಎಂದು ಓದುತ್ತೇವೆ. ಮಗಳ ಓದಿಗೆ ಹಣ ಉಳಿಸಿ ಎಂದು ಯಾರೂ ಹೇಳುವುದಿಲ್ಲ. ಹಾಗಾದರೆ ಮಹಿಳೆಯರಿಗೆ ಮದುವೆಯಾಗಿ ಮಕ್ಕಳು ಮಾಡಿ ಅವರಿಗೆ ಮದುವೆ ಮಾಡುವುದು ಮಾತ್ರ 'ಸಾಮಾಜಿಕ ಜವಾಬ್ದಾರಿ'ಯೇ?

ಮಹಿಳೆಯರು ಮದುವೆಯಾಗದೇಯೇ ಇರಬೇಕು ಎನ್ನುವುದು ಖಂಡಿತಾ ನನ್ನ ಧೋರಣೆ ಅಲ್ಲ. ನಾನು ಬಯಸುವುದು ನಮ್ಮ ಸಮಾಜದಲ್ಲಿ ಎಲ್ಲರೂ "ಅವರವರ ಬದುಕು ಅವರವರದು" ಎನ್ನುವುದನ್ನೇ ಒಪ್ಪಿ ತಮ್ಮ ಪಾಡಿಗೆ ತಾವಿದ್ದರೆ ಸಾಕು. ನನಗೆ ಮದುವೆ ಆಗಬೇಕು ಎನ್ನಿಸಿದರೆ ಆಗುತ್ತೇನೆ. ಇಲ್ಲದಿದ್ದರೆ ಇಲ್ಲ. ಒಂದು ಹೆಣ್ಣಿಗೆ ಮದುವೆಯಾಗದಿದ್ದರೆ ಅವಳ ಮನೆಯವರು ಮಾತ್ರವಲ್ಲ ಅವರ ನೆಂಟರು ಅವರ ಸ್ನೇಹಿತರು, ಸ್ನೇಹಿತರ ಸ್ನೇಹಿತರು ಎಲ್ಲರೂ ಚಿಂತಿಸುತ್ತಾರೆ. ಇದರಿಂದ ತನಗೆ ರಕ್ಷಣೆ ಇದೆ, ತನ್ನನ್ನು ಕುರಿತು ಚಿಂತಿಸುವ ಜನರಿದ್ದಾರೆ ಎಂದು ಅವಳು ಹೆಮ್ಮೆ ಪಡಬೇಕೇ? ಅದು ಹೋಗಲಿ ಬದಲಾದ ಈ ಕಾಲದಲ್ಲಿ ಯುವತಿ ಯರು ಸಾಕಷ್ಟು ಜನ ಗಂಡಸರ ಪರಿಚಯವನ್ನೋ. ಸ್ನೇಹವನ್ನೋ ಪಡೆದಿರುತ್ತಾರೆ. ತಮಗೆ ಸರಿಬಂದವರನ್ನು ತಾವೇ ಆರಿಸಿ ಮದುವೆಯಾದಾಗ ಈಗಲೂ ದೊಡ್ಡ ರಾದ್ಧಾಂತ ಎಬ್ಬಿಸುವುದು ಯಾತಕ್ಕೆ?

ವೈಯಕ್ತಿಕವಾಗಿ ಒಂದು ಧ್ಯೇಯವನ್ನಿಟ್ಟುಕೊಂಡ ಮೇಲೆ ಅದಕ್ಕೆ ತಕ್ಕಂತೆ ಬಾಳಿದರೆ ಸಾಕು. ಎಲ್ಲರ ಎದುರಿಗೆ ಒಂದು ಮಾತು ಹೇಳಿ ಅನಂತರ ಅದಕ್ಕೆ ತದ್ವಿರುದ್ಧವಾಗಿ ನಡೆದರೆ ಅದು ಬೇಜವಾಬ್ದಾರಿತನ ಆಗುತ್ತದೆ ಎಂದು ನನ್ನ ಭಾವನೆ.

ನಾನು ಯಾವುದೇ ಕಟ್ಟುಪಾಡಿಗೆ ಒಳಗಾಗಿ ಬೆಳದಿಲ್ಲ. ಆದರೂ ಎಂದೂ ನನ್ನಲ್ಲಿ 'ಸಾಮಾಜಿಕ ಜವಾಬ್ದಾರಿ' 'ಹೆಂಗಸಿನ ಜವಾಬ್ದಾರಿ' 'ಮೇಲು ಕೀಳು' ಇತ್ಯಾದಿ ಸಮಸ್ಯೆಗಳು ಹುಟ್ಟಿಯೇ ಇಲ್ಲ. ನನಗಿಂತ ಹೆಚ್ಚಾಗಿ ನನ್ನ ಬಗ್ಗೆ ಇತರರು ಯೋಚಿಸುವುದರಿಂದಲೇ ನಮ್ಮಲ್ಲಿ ತೊಡಕುಗಳು ಉಂಟಾಗುವುದು. 'ಅವರವರ ಧೋರಣೆ ಅವರವರದು, ನಮಗೆ ಬೇಕಾದಂತೆ ನಾವು ಬಾಳುತ್ತೇವೆ, ಇತರರು ತಮಗೆ ಬೇಕಾದಂತೆ ಬಾಳಲಿ' ಎನ್ನುವ ಧೋರಣೆ ನಮ್ಮ ಸಮಾಜದಲ್ಲಿ ಬರುವವರೆಗೆ ಪ್ರತಿಯೊಬ್ಬರೂ 'ಜನ ಏನು ಹೇಳುತ್ತಾರೋ' ಎನ್ನುವ ಭಯದಲ್ಲಿ ಮಾಡಬೇಕಾದುದನ್ನು ಮಾಡದೆ, ಇಷ್ಟವಿಲ್ಲದುದನ್ನು ಮಾಡುತ್ತಾ ಇರುತ್ತಾರೆ. ಆಗಲೇ ನಾವು "ಸಾಮಾಜಿಕ ಜವಾಬ್ದಾರಿ" ಎನ್ನುವುದನ್ನು ವಿಷಯವನ್ನಾಗಿ ತೆಗೆದುಕೊಂಡು ಲೇಖನಗಳನ್ನು ಸಹ ಬರೆಯಬೇಕಾಗುತ್ತದೆ.

ತಮ್ಮನ್ನು ತಾವು ಕೀಳು ಮಾಡಿಕೊಳ್ಳುವ ಹೆಂಗಸರನ್ನು ಕುರಿತು ಸಾಕಷ್ಟು ಲೇಖನಗಳು ಈಗಾಗಲೇ ಬಂದಿವೆ. ಆದ್ದರಿಂದಲೇ ಒತ್ತಾಯಕ್ಕೆ ಒಳಗಾದ ಹೆಂಗಸರನ್ನು ಕುರಿತು ನಾನಿಲ್ಲಿ ಚಿಂತಿಸಿಲ್ಲ. ಗಂಡಸರನ್ನು ಕುರಿತೂ ಪ್ರತ್ಯೇಕವಾಗಿ ಹೇಳಿಲ್ಲ. ಏಕೆಂದರೆ ಎಲ್ಲರೂ ತಮಗೆ ಸರಿಯಾದ ಸಂಗಾತಿಗಳನ್ನು ಆರಿಸಿಕೊಂಡಾಗ ಹೊಂದಾಣಿಕೆ ಎನ್ನುವುದು ಸಹಜವಾಗಿ ಬರುತ್ತದೆ. ಅಲ್ಲದೆ ಅದು ತೀರ ವೈಯಕ್ತಿಕ ವಿಷಯ. ಹಾಗೆ ನೋಡಿದರೆ ಈ ವಿಚಾರ, ವಾದ, ಲೇಖನ, ಘೋಷಣೆ ಎಲ್ಲ ಎಷ್ಟೇ ನಡೆದರೂ, ಸರಳವಾಗಿ, ಹೊಂದಿಕೊಂಡು ಬಾಳುವ ಎಷ್ಟೋ ಹೆಂಗಸರು ತಮ್ಮ ವ್ಯಕ್ತಿತ್ವವನ್ನೂ ಬಿಟ್ಟುಕೊಡದೆ ಸರಿಯಾದ balance ಅನ್ನು ಸಾಧಿಸುತ್ತಾರೆ ಎಂದು ನನಗನ್ನಿಸುತ್ತದೆ. ಅವರಿಗೇಕೆ ಈ ತೊಳಲಾಟಗಳೆಲ್ಲ ಇಲ್ಲ ? ಅಥವಾ ಅವರು Ignorance is bliss ಎನ್ನುವುದಕ್ಕೆ ತಕ್ಕ ಉದಾಹರಣೆಗಳಾಗಿದ್ದಾರೆಯೋ ? ವಿಷಯದ ಜಾಡನ್ನು ಬಿಟ್ಟು ದೂರ ಬಂದಿದ್ದೇನೆ. ಆದರೆ ಅದಕ್ಕೆ ಪೂರಕವಾಗಿಯೇ ಈ ಆಲೋಚನೆಯೂ ಇದೆ ಎಂದು ನಂಬಲೆ ?

—o—

# ವಿಜಯಾರವರ ಭ್ರಾಮಕ ಲೋಕದ ಕನಸು

—ಎನ್. ಗಾಯತ್ರಿ

ಇಡೀ ಮಾನವನ ಇತಿಹಾಸವನ್ನು ಅವಲೋಕಿಸಿದಾಗ, ಎಲ್ಲಿ ಸಮಾಜದ ಒಟ್ಟು ಉತ್ಪಾದನೆಯಲ್ಲಿ ಮಹಿಳಾಸಮುದಾಯ ತೊಡಗಿದೆಯೋ, ಅಲ್ಲಿಯೇ ಅವರ ವಿಮೋಚನೆಯಾಗಿರುವುದು ಕಂಡುಬರುತ್ತದೆ. ಮಹಿಳೆಯ ವೈಯಕ್ತಿಕ ವಿಮೋಚನೆಯಷ್ಟೇ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನಗಳಲ್ಲಿ ಬದಲಾವಣೆಯನ್ನು ಉಂಟುಮಾಡುವುದಿಲ್ಲ. ಈ ಬದಲಾವಣೆಯ ಹಂತದ ಸಂಕ್ರಮಣಾವಸ್ಥೆಯಲ್ಲಿ ಮಹಿಳೆ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಮಹಿಳೆ ಪುರುಷನಿಗಿಂತ ಭಿನ್ನವಾದ ತಾಯ್ತನ-ಮುಂತಾದ ಕೆಲವೊಂದು ಜೈವಿಕ ಚಟುವಟಿಕೆಗಳಲ್ಲಿ ತೊಡಗಿರುವುದರಿಂದ ಪುರುಷನೊಂದಿಗೆ ಸಮಾನತೆಗಾಗಿ ಹೋರಾಟ ನಡೆಸುವಾಗ ತನ್ನದೇ ಆದ ಮಿತಿಯಲ್ಲಿ ಕೆಲವೊಂದು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಈ ಸಮಸ್ಯೆಗಳ ವಿರುದ್ಧ ಹೋರಾಟ ನಡೆಸಲು ಮಹಿಳೆಯರು ಸಂಘಟಿತರಾಗಬೇಕಾದದ್ದು ತೀರ ಅವಶ್ಯಕ. ಈ ಸಂಘಟಿತ

---

"ದುಡಿಯುವ ಮಹಿಳೆಯ ಚಳುವಳಿಯ ಕಾರ್ಯೋದ್ದೇಶ ಸ್ತ್ರೀ ಪುರುಷರ ಔಪಚಾರಿಕ ಸಮಾನತೆ ಮಾತ್ರವಾಗಿರದೆ, ಆರ್ಥಿಕ ಮತ್ತು ಸಾಮಾಜಿಕ ಸಮಾನತೆಗಾಗಿನ ಹೋರಾಟವೂ ಆಗಬೇಕು. ಮಹಿಳೆಯರು ಸಾಮಾಜಿಕವಾಗಿ ಉತ್ಪನ್ನಕಾರಕ ದುಡಿಮೆಯಲ್ಲಿ ಪಾಲ್ಗೊಂಡು ಗೃಹಕೃತ್ಯದ ದಾಸ್ಯತನದಿಂದ ವಿಮೋಚನೆ ಹೊಂದುವಂತಾಗಬೇಕು ಮತ್ತು ಈ ಮಹಿಳೆಯರು ಅಡಿಗೆಯ, ತಾಯ್ತನದ ಮತ್ತು ದಾದಿಯ ಕೆಲಸದಲ್ಲೇ ಮರುಳಾಗಿ, ಅಪಮಾನಕ್ಕೆ ಗುರಿಯಾಗುವಂತಿದ್ದು, ನಿರಂತರ ದಾಸ್ಯಕ್ಕೆ ಒಳಪಟ್ಟು ಶಾಶ್ವತ ಗುಲಾಮಚಾಕರಿಯಿಂದ ಮುಕ್ತರಾಗಬೇಕಾದದ್ದು ಅತ್ಯಂತ ಮಹತ್ವದ ಸಂಗತಿ.

ಸಾಮಾಜಿಕ ಮತ್ತು ನೈತಿಕ ವ್ಯವಸ್ಥೆಗಳ ಆಮೂಲಾಗ್ರ ಪುನರ್ರಚನೆಯನ್ನು ಅಪೇಕ್ಷಿಸುವ ಈ ಹೋರಾಟ ಅತ್ಯಂತ ದೀರ್ಘಕಾಲ ನಡೆಯಬೇಕಾದ್ದು. ಆದರೆ ಈ ಹೋರಾಟ ಕಮ್ಯೂನಿಸಂನ ವಿಜಯದೊಂದಿಗೆ ಕೊನೆಗೊಳ್ಳುತ್ತದೆ."

—ವಿ.ಐ. ಲೆನಿನ್ : "ಮಹಿಳೆಯ ವಿಮೋಚನೆ ಯನ್ನು ಕುರಿತು"

ರಾದ ಮಹಿಳೆಯರು ತಮ್ಮ ಹೋರಾಟದಿಂದ ದೊರಕಿಸಿಕೊಂಡ ಫಲಗಳನ್ನು ಅಸಂಘಟಿತ ಮಹಿಳೆಯರಿಗೂ ದೊರಕುವಂತೆ ಮಾಡಬೇಕಾದದ್ದು ಅಷ್ಟೇ ಮುಖ್ಯ. 'ದುಡಿಮೆಯನ್ನು ಪ್ರಶ್ನೆಯ ಮೂಲಭೂತ ಪಕ್ಷ' ಎಂದು ಒಪ್ಪಿಕೊಂಡ ಮಹಿಳೆಯರೂ ಈ ಮೂಲಭೂತ ಪ್ರಶ್ನೆಯ ಬಗ್ಗೆ ಉಳಿದ ಮಹಿಳೆಯರೂ ಪ್ರಜ್ಞಾವಂತರಾಗಿ ಎಚ್ಚರಗೊಳ್ಳುವಂತೆ ಮಾಡಬೇಕಾದದ್ದು ಅವರ ಮುಂದಿರುವ ಕೆಲಸ.

ಸಾಮಾಜಿಕ ಜವಾಬ್ದಾರಿ ಎನ್ನುವಾಗ ವೈಯುಕ್ತಿಕ ಅನುಭವಗಳನ್ನು ಬಿಟ್ಟು, ಬೇರೆ ಯಾರದೋ ಅನುಭವಗಳ ತಳಹದಿಯಲ್ಲಿ ಹೋರಾಟ ನಡೆಸುತ್ತೇನೆಂದರೆ, ಅದು ತಪ್ಪಾಗುತ್ತದೆ. ಆದರೆ ವೈಯುಕ್ತಿಕ ಅನುಭವಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ ಮನೋಭಾವ ಮತ್ತು ಅದಕ್ಕೆ ಬೇಕಾದ ತಾಳ್ಮೆ ಮತ್ತು ಪರಿಶ್ರಮ ಇದ್ದರೆ, ಆಗ ಸಮಾಜದ ಉಳಿದ ಸದಸ್ಯರುಗಳ ಅನುಭವವನ್ನು ವೈಯುಕ್ತಿಕ ಅನುಭವದೊಂದಿಗೆ ಸಮೀಕರಿಸಿಕೊಳ್ಳಲು ಸಾಧ್ಯವಾಗುತ್ತದೆ. ಈ ರೀತಿ ಸಾಮಾಜಿಕ ಸಮಸ್ಯೆಗಳನ್ನು ತನ್ನ ವೈಯುಕ್ತಿಕ ಸಮಸ್ಯೆಯೆಂದುಕೊಳ್ಳುವಲ್ಲಿ ಮಹಿಳೆ ಯಶಸ್ವಿಯಾದರೆ, ಆಗ ಅವಳು ವಹಿಸುವ ಜವಾಬ್ದಾರಿ ನಿಜವಾದ ಸಾಮಾಜಿಕ ಜವಾಬ್ದಾರಿಯಾಗುತ್ತದೆ. ಈ ಹಿನ್ನೆಲೆಯಲ್ಲಿ ಮಹಿಳೆಯ ವಿಮೋಚನೆ, ಜವಾಬ್ದಾರಿ ಮತ್ತು ಸಮಸ್ಯೆಗಳನ್ನು ಕುರಿತು ಗಂಭೀರವಾಗಿ ಚರ್ಚಿಸುವಾಗ, ಕಳೆದ ಸಂಚಿಕೆಯಲ್ಲಿ ಪ್ರಕಟವಾದ ಶ್ರೀಮತಿ ವಿಜಯಾ ರವರ "ನಾವು ಗಂಡಸರ ಮುಂದೆ ಸೋತು......" ಲೇಖನದ ಬಗ್ಗೆ ಕೆಲವೊಂದು ಮಾತುಗಳನ್ನು ಆಡಬೇಕೆನ್ನಿಸುತ್ತದೆ. ಈ ಲೇಖನದಲ್ಲಿ ಸಮಾಜದಲ್ಲಿ ಮಹಿಳೆಯ ಸಮಸ್ಯೆಯನ್ನು ಕುರಿತು ಅವೈಜ್ಞಾನಿಕ ವಿಶ್ಲೇಷಣೆ ಕಂಡುಬರುತ್ತದೆ.

ರಾಷ್ಟ್ರದ ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಅತ್ಯಂತ ಕಾಳಜಿವಹಿಸುವ ವಿಜಯಾರವರು ಸಾಮಾಜಿಕ ಅಂಶಗಳನ್ನು ಅವುಗಳ ಆರ್ಥಿಕ ಮುಖಗಳಿಂದ ಬೇರ್ಪಡಿಸಿನೋಡುವುದರಿಂದ ಗೊಂದಲಕ್ಕೊಳಗಾಗಿ ಅನೇಕ ತಪ್ಪು ತೀರ್ಮಾನಗಳನ್ನು ತೆಗೆದುಕೊಳ್ಳುತ್ತಾರೆ. ಇಂಜನಿಯರ್ ಹುಡುಗಿಯರತ್ತ ಹರಿಹಾಯುವ ವಿಜಯಾರವರು ವಿಜ್ಞಾನದ ವಿಷಯುಗಳಲ್ಲಿ ಚಿನ್ನದ ಪದಕ ಪಡೆದೂ ಬ್ಯಾಂಕ್ ನೌಕರರಾಗಿರುವ ಸ್ತ್ರೀ ಪುರುಷರತ್ತ ಗಮನ ಹರಿಸುವುದಿಲ್ಲವೇಕೆ ? ಇಂತಹ ಪರಿಸ್ಥಿತಿಗೆ ರಾಷ್ಟ್ರದ ಯೋಜನಾರಹಿತ ಅರ್ಥಿಕರಚನೆಯಷ್ಟೇ ನಮ್ಮ ವಿಕೃತ ವಿದ್ಯಾಭ್ಯಾಸ ಪದ್ಧತಿಯೂ ಕಾರಣ ಎಂಬುದನ್ನು ಗುರುತಿಸುವುದಿಲ್ಲವೇಕೆ ? ಕೇವಲ ಮಹಿಳೆಯರ ಧೋರಣೆಯತ್ತ ಮಾತ್ರ ಬೆಟ್ಟು ಮಾಡುವ ವಿಜಯಾರವರು ತಮ್ಮ ವಾದದ ಸಮರ್ಥನೆಗೆ ಯಾವ ನಂಬಲರ್ಹ ಅಂಕಿ ಅಂಶಗಳನ್ನು ಕೊಡುವುದಿಲ್ಲ.

ಕೊಲಬಹುದು. ಅದು ಅವರು ಜಗತ್ತನ್ನು ಮುನ್ನಡೆಸುವ ದಾರಿ."

ಆಕಸ್ಮಾತ್ತಾಗಿ ಈ ಸಿದ್ಧಾಂತದ ಒಂದು ವ್ಯವಹಾರ್ಯ ಸಲಹೆ ಒಬ್ಬ ವಿದ್ಯಾರ್ಥಿ ಬೇರೆ ಯಾರೊಡನೆಯೋ ಮಾಡುತ್ತಿದ್ದ ಒಣ ಚರ್ಚೆಯ ಮಧ್ಯದಲ್ಲಿ ಅವನ ಕಿವಿಯ ಮೇಲೆ ಬಿದ್ದಿರುತ್ತದೆ :

"ಗಿರವಿಯ ವ್ಯಾಪಾರ ನಡೆಸಿ ಸುಲಿಗೆ ಮಾಡುತ್ತಿರುವ ಒಬ್ಬ ದುಷ್ಟ ಮುದುಕಿಯನ್ನು ಕೊಲ್ಲು. ಅವಳ ಹಣ ತೆಗೆದುಕೋ. ಅದರ ನೆರವಿನಿಂದ ಮಾನವತೆಯ ಸೇವೆ. ಎಲ್ಲರ ಕಲ್ಯಾಣ ಸಾಧಿಸು. ಸಾವಿರಾರು ಸತ್ಕಾರ್ಯಗಳಿಂದ ಒಂದು ಅಪರಾಧ ತೊಡೆದು ಹೋಗುವುದಿಲ್ಲವೇ ? ಒಂದು ಸಾವಿನಿಂದ ಸಾವಿರಾರು ಬದುಕುಗಳು ಭ್ರಷ್ಟತೆಯಿಂದ, ಅವನತಿಯಿಂದ ಉಳಿಯುವುವು. ಒಂದು ಸಾವು ನೂರು ಜನರ ಬದುಕಿಗೆ ಸಮ. ಗಣಿತದಷ್ಟೇ ಸರಳ. ಜಗತ್ತಿನ ಜೀವರಾಶಿಯ ತಕ್ಕಡಿಯಲ್ಲಿ ಆ ಒಂದು ರೋಗಗ್ರಸ್ತ ಮೂರ್ಖ ದುಷ್ಟಸ್ವಭಾವದ ಮುದುಕಿಯ ಜೀವನದ ಬೆಲೆ ಏನು ?"

ಆ ಮುದುಕಿಯನ್ನು ಇವನೂ ಬಲ್ಲ. ಬೀಜರೂಪವಾದ ಈ ಸಲಹೆ ಇದೇ ಸಿದ್ಧಾಂತದಿಂದ ಸಿದ್ಧವಾಗಿದ್ದ ಮನೋಭೂಮಿಯಲ್ಲಿ ಬಿದ್ದು, ಮೊಳೆತು ಅವನ ಎಲ್ಲ ಸಮಸ್ಯೆಗಳಿಗೆ ನೇರ ಪರಿಹಾರವಾಗಿ ತೋರುತ್ತದೆ. ಒಂದು ದಿನ ಅವಳ ಮನೆಗೆ ಹೋಗಿ ಗಿರವಿ ಮಾಲು ಒಂದನ್ನು ಅವಳಿಗೆ ತೋರಿಸುವ ನೆಪದಲ್ಲಿ ನಾನು ಕೊಂಡೊಯ್ದಿದ್ದ ಒಂದು ಕೊಡಲಿಯಿಂದ ಅವಳನ್ನು ತಲೆಯೊಡೆದು ಕೊಂದ. ಆಗ ಅವನು ಎಚ್ಚರದಿಂದ, ಸಂಯಮದಿಂದ ಇದ್ದ. ಅವನ ಮನಸ್ಸಿನಲ್ಲಿ ಏನೂ ಗಡಿಬಿಡಿ ಇರಲಿಲ್ಲ. ಅವಳ ಕುತ್ತಿಗೆಯಲ್ಲಿದ್ದ ಹಣದ ಚೀಲವನ್ನು ಗಿರವಿಯ ವಿವಿಧ ಚಿನ್ನದ ಮಾಲುಗಳನ್ನೂ ದೋಚಿದ. ಅಷ್ಟು ಹೊತ್ತಿಗೆ ಸತ್ತ ಮುದುಕಿಯ ತಂಗಿ ಹೊರಗಿನಿಂದ ಮನೆಗೆ ಬರುತ್ತಾಳೆ. ಅವಳನ್ನೂ ಕೊಲ್ಲುತ್ತಾನೆ. ಹೀಗೆ ಸದುದ್ದೇಶಕ್ಕಾಗಿ ಕೊಲ್ಲುವ, ದೋಚುವ ಹಕ್ಕನ್ನು ಚಲಾಯಿಸುತ್ತಾನೆ. ಆಶ್ಚರ್ಯಕರ ರೀತಿಯಲ್ಲಿ ಯಾರಿಗೂ ಸುಳಿವು ಕೊಡದೆ ಮನೆಗೆ ಹಿಂತಿರುಗುತ್ತಾನೆ. ಕಳುವು ಮಾಡಿದ್ದ ಸಾಮಾನುಗಳನ್ನು ಯಾರೂ ಕಾಣದಂತೆ ಮುಚ್ಚಿಡುತ್ತಾನೆ. ಜೋಡಿ ಕೊಲೆ ಮಾಡಿದ್ದನ್ನು ಯಾರೂ ಕಂಡಿರಲಿಲ್ಲ. ಚೀಲದ ತುಂಬ ಹಣ, ಚಿನ್ನದ ಆಭರಣಗಳನ್ನು ದೋಚಿ ತಂದಿದ್ದ. ಇನ್ನು ಅವನು ತನ್ನ ತಾಯಿಯ, ಸೋದರಿಯ ಸಮಸ್ಯೆಗಳನ್ನು ಬಗೆಹರಿಸಬಹುದು. ತಾನು ಮಹತ್ಕಾರ್ಯದಲ್ಲೂ ತೊಡಗಬಹುದು,

ಆದರೆ ಆ ಕ್ಷಣದಿಂದ ಅವನಲ್ಲಿ ಕ್ಷೀಣವಾಗಿ ಇದ್ದೂ ಇಲ್ಲದಂತಿದ್ದ ಅಂತಃಸ್ಸಾಕ್ಷಿಯ ಕಿಡಿ ನಿಧಾನವಾಗಿ ಹತ್ತಿಕೊಂಡು ಕೊಳ್ಳಿಯಾಗಿ ಉರಿಯತೊಡಗುತ್ತದೆ. ಎಲ್ಲಿಗೆ ಹೋದರೂ, ಏನೂ ಮಾಡಿದರೂ ಅವನಿಗೆ ಮೊದಮೊದಲು ತನ್ನ ಅಪರಾಧದ ಪತ್ತೆಯ ಭೂತಸ್ವಪ್ನ ಕಾಡತೊಡಗುತ್ತದೆ. ಒಳಗುದಿ, ಜ್ವರ, ಬಡಬಡಿಕೆ, ಸನ್ನಿ, ಭ್ರಮೆ, ಗಿಲಿ ಇಂತಹ ಮನೋವಿಕಾರಗಳು ಅವನ ವ್ಯಕ್ತಿತ್ವವನ್ನು ಆಕ್ರಮಿಸಿ ದೇಹವನ್ನು ಜರ್ಝರಗೊಳಿಸಿ ಹುಚ್ಚಿನ ಅಂಚಿಗೆ ಎಳೆದೊಯ್ಯುತ್ತವೆ. ಮನಃ ಶಾಂತಿ ಸಂಪೂರ್ಣ ನಾಶವಾಗಿ ಕರ್ತವ್ಯದ ಬೆಳಕು ಕಾಣದೆ ಅವನ ಅಂತರಂಗ ಅಲ್ಲೋಲ ಕಲ್ಲೋಲವಾಗಿದೆ. ಹಲವು ಕಾಕತಾಳೀಯಗಳು ಘಟಿಸಿದರೂ ಎಷ್ಟೇ ಗುಮಾನಿ ಬಂದರೂ ಅವನ ಅಪರಾಧ ಪೊಲೀಸರಿಂದ ಪತ್ತೆ ಆಗುವುದಿಲ್ಲ. ಹೀಗೆ ರಾಜ್ಯಶಕ್ತಿಯಿಂದ ನಿರಾತಂಕವಾದರೂ ಈಗ ಪೂರ್ಣ ಎಚ್ಚೆತ್ತ ಅಂತಃಶಕ್ತಿ ಅವನ ಮೇಲೆ ದಂಗೆ ಸಾರಿ ಆದಿ ಅಂತ್ಯವಿಲ್ಲದ ಬೇಗುದಿ ಎಬ್ಬಿಸಿದೆ. ಅದರಿಂದ ಹೊರಬರುವ ಮಾರ್ಗಕ್ಕಾಗಿ ತೊಳಲಾಟ ನಿರಂತರವಾಗಿ ನಡೆದಿದೆ. ಈ ಎಲ್ಲ ಹೋರಾಟ ಅವನ ಹೃದಯ ಕ್ಷೇತ್ರದಲ್ಲಿ ನಡೆಯುತ್ತದೆ.

ಈ ಸನ್ನಿವೇಶದಲ್ಲಿ ಅವನಿಗೆ ತನ್ನ ಮಲತಾಯಿಯನ್ನು ಸಾಕುವುದಕ್ಕಾಗಿ ತಾನು ಬೀದಿಗಿತ್ತಿಯಾಗಿದ್ದ ಸೋನಿಯಾ ಎಂಬ ಹೆಣ್ಣಿನ ಪರಿಚಯವಾಗುತ್ತದೆ. ಯಾವುದೋ ಅಗೋಚರ ಬಿರುಗಾಳಿ ಸಮಾನವಾಗಿ ಧರ್ಮಭ್ರಷ್ಟರಾದ ಅವರಿಬ್ಬರನ್ನೂ ಒಂದು ನಿರ್ಜನವಾದ ನಡುಗಡ್ಡೆಗೆ ತಂದು ಒಟ್ಟಿಗೆ ಎಸೆದಿದೆ. ಅವನು ಕೊಲೆಗಾರನಾದರೆ, ಅವಳು ಬಸವಿ. ಆದರೆ ಅವಳ ಈ ಹೊರ ಬದುಕಿಗೆ ವಿರುದ್ಧವಾದ, ವಿಶುದ್ಧವಾದ ಒಳ ಬದುಕು ಅವಳದು. ಅಬಲೆಯಾದ ಅವಳ ಅಂಗಾಂಗಗಳಲ್ಲೂ ಕರುಣೆ ಸ್ರವಿಸುತ್ತದೆ. ನಿಧಾನವಾಗಿ ಅವನು ಅವಳ ಪ್ರಭಾವಲಯಕ್ಕೆ ಒಳಗಾಗಿ ಅವಳು ತನ್ನ ಸಹಧರ್ಮಿಣಿ ಎಂದು ಅವನಿಗೆ ಎನಿಸುತ್ತದೆ. ಅವನು ಅವಳನ್ನು ಕುರಿತು ಹೀಗೆ ಹೇಳುತ್ತಾನೆ :

> "ನೀನೂ ಒಂದು ಬದುಕನ್ನು ನಾಶ ಮಾಡಿರುವೆ–ನಿನ್ನದೇ ಬದುಕನ್ನು. ನೀನೊಬ್ಬಳೇ ಇದ್ದರೆ ನನ್ನಂತೆ ನಿನಗೂ ಹುಚ್ಚು ಹಿಡಿಯುತ್ತದೆ. ಆದ್ದರಿಂದ ನಾವಿಬ್ಬರೂ ಒಂದೇ ಮಾರ್ಗದಲ್ಲಿ ಹೋಗಬೇಕಾಗಿದೆ. ಹೋಗೋಣ."

ದುಸ್ಸಹವಾದ ಆತ್ಮಗ್ಲಾನಿಗೊಳಗಾದ ಅವನಿಗೆ ಅವನ ಸ್ವಾನುಭವ ಪಕ್ವವಾಗಿ ಧರ್ಮಪ್ರಜ್ಞೆ ಜಾಗೃತವಾಗಿ ಅಂತರ್ಶೋಧೆ ಮನಸ್ಸಿನಲ್ಲಿ ಮಿಡಿಯುತ್ತಿದ್ದಾಗ ಅವಳ ಉಪದೇಶ :

"ಈಗಲೇ, ಈಕ್ಷಣ ಹೋಗು. ಅಡ್ಡ ರಸ್ತೆಯಲ್ಲಿ ನಿಲ್ಲು. ತಲೆಬಾಗಿ ನೀನು ಅಪವಿತ್ರಗೊಳಿಸಿರುವ ನೆಲಕ್ಕೆ ಮುತ್ತಿಡು. ಅನಂತರ ಜಗತ್ತಿಗೆಲ್ಲಿ ತಲೆಬಾಗಿ ಎಲ್ಲ ಜನರಿಗೂ ಹೇಳು 'ನಾನು ಕೊಲೆಗಡುಕ'. ಆಗ ದೇವರು ನಿನಗೆ ಹೊಸ ಬದುಕನ್ನು ನೀಡುವನು."

ಅವಳು ಅವನಿಗೆ ಒಂದು ಶಿಲುಬೆಯನ್ನು ನೀಡಿ, ಹೊಸ ಒಡಂಬಡಿಕೆಯ ಒಂದು ಹೃದಯಸ್ಪರ್ಶಿ ಅಧ್ಯಾಯಿಕೆಯನ್ನು ಅವನ ಕೋರಿಕೆಯಂತೆ ಓದುತ್ತಾಳೆ—ಮೃತನಾದ ಲಾಜರಸ್ ಏಸುವಿನ ಕೃಪೆಯಿಂದ ಮತ್ತೆ ಎದ್ದು ಬಂದದ್ದು. ಹಾಗೆಯೇ ಅವನಿಗೆ ಅವಳು ಒಟ್ಟಿಗೆ ನರಳುವ, ಒಟ್ಟಿಗೆ ಶಿಲುಬೆ ಧರಿಸುವ ಒಟ್ಟಿಗೆ ಪಾಪವನ್ನು ಕಳೆದುಕೊಳ್ಳುವ ದೀಕ್ಷೆಯ, ಪ್ರೇಮಮಯ ಸಹಚರ್ಯದ ಬಲವನ್ನೂ ನೀಡುತ್ತಾಳೆ. ಕಡೆಗೆ ಅವನು ತನ್ನ ಅಪರಾಧವನ್ನು ಸಾಬೀತು ಮಾಡಲಾರದ ಪೊಲೀಸರಲ್ಲಿಗೆ ತಾನೇ ಹೋಗಿ ತಪ್ಪೊಪ್ಪಿಕೊಳ್ಳುತ್ತಾನೆ.

ದೂರದ ಸೈಬೀರಿಯಾದಲ್ಲಿ ಎಂಟು ವರುಷ, ಗಡೀಪಾರಾಗಿ ದುಡಿಯುವ ಶಿಕ್ಷೆ ದೊರೆಯುತ್ತದೆ. ಅವನ ನೆರಳಿನಂತೆ ಅವಳೂ ಅವನನ್ನು ಹಿಂಬಾಲಿಸಿ ಅಲ್ಲಿ ಪ್ರತಿಯಂತೆ ಅವನ ಬಿಡುಗಡೆಗಾಗಿ ಕಾಯುತ್ತಾಳೆ. ನಿವೇದನೆ ಹಾಗೂ ಶಿಕ್ಷೆಯ ಸ್ವೀಕಾರ ಮತ್ತು ಅವಳೊಂದಿಗೆ ಸಾಧಿಸಿದ ಏಕಾತ್ಮತೆಯಿಂದ ಅವನ ಮನಶ್ಶಾಂತಿ ನಿಧಾನವಾಗಿ ಮರಳುತ್ತದೆ. ಅವನ ಅಪರಾಧ, ಸೆರೆವಾಸ–ಇವು ಅವನಿಗೆ ಈಗ ಹೊರಗಿನ ವ್ಯಾಪಾರಗಳು, ಅವನ ಒಳಗನ್ನು ಅವು ಮುಟ್ಟವು. ಅವನ ಆತ್ಮ ಸಂಸ್ಕರಣ ಆರಂಭವಾಗಿದೆ. ಅವನ ಹೊಸ ಬದುಕಿನ ಹೊಂಗಿರಣ ಉದಯಿಸಿದೆ.

ಭಗವದ್ಗೀತೆ ಹಾಗೂ ಅಪರಾಧ ಮತ್ತು ಶಿಕ್ಷೆ ಎರಡೂ ಕೃತಿಗಳು ಶೋಧಿಸುವುದು ಸಾಧನ ಮತ್ತು ಉದ್ದೇಶಗಳ ಸಂಕೀರ್ಣ ಸಂಬಂಧವನ್ನು. ಭಗವದ್ಗೀತೆ ಸುದುದ್ದೇಶಕ್ಕಾಗಿ ಯುದ್ಧದ–ಸಾಮೂಹಿಕ ಕೊಲೆಯ–ನೈತಿಕತೆಯನ್ನು ಪ್ರಶ್ನಿಸುವ ಒಳಗುದಿಯಿಂದ ಆರಂಭವಾಗಿ ಅಂಥ ನೈತಿಕತೆಯನ್ನು ಒಪ್ಪತೊಡಗುವುದರಲ್ಲಿ ಪರ್ಯವಸಾನವಾಗಿದೆ. 'ಅಪರಾಧ ಮತ್ತು ಶಿಕ್ಷೆ' ಸುದುದ್ದೇಶಕ್ಕಾಗಿ ಕೊಲೆಯ ನೈತಿಕತೆಯನ್ನು ಒಪ್ಪತೊಡಗುವುದರಿಂದ ಆರಂಭವಾಗಿ ಅದನ್ನು ತಿರಸ್ಕರಿಸುವ ಧರ್ಮದಲ್ಲಿ ಪರ್ಯವಸಾನವಾಗುತ್ತದೆ. ಭಗವದ್ಗೀತೆಯಲ್ಲಿ ಅಪೌರುಷೇಯ ಶಕ್ತಿಯ ತರ್ಕ ವೈಭವ ಮೆರೆದರೆ "ಅಪರಾಧ ಮತ್ತು ಶಿಕ್ಷೆಯಲ್ಲಿ" ರಾಸ್ಕೋಲ್ನಿಕೋವ್–ಸೋನಿಯಾರ ಮಾನವೀಯ ಅರಸಿಕೆಯ ಭಾವ ವೈಭವ ಮೆರೆಯುತ್ತದೆ. ಭಗವದ್ಗೀತೆಯಲ್ಲಿ ಅರ್ಜುನ ವಿಷಾದಯೋಗ ಗೌಣವಾಗಿದ್ದರೆ 'ಅಪರಾಧ ಮತ್ತು ಶಿಕ್ಷೆಯಲ್ಲಿ' ರಾಸ್ಕೊ

ಲ್ನಿಕೋವನ ವಿಷಾದವೇ ಪ್ರಧಾನ. ಭಗವದ್ಗೀತೆ ಹೆಚ್ಚು ದಾರ್ಶನಿಕ ಗ್ರಂಥವಾದರೆ, ಅಪರಾಧ ಮತ್ತು ಶಿಕ್ಷೆ ಹೆಚ್ಚು ಮಾನವೀಯ ಕೃತಿ. ಒಂದು ರೀತಿಯಲ್ಲಿ ಅಪರಾಧ ಮತ್ತು ಶಿಕ್ಷೆ ಭಗವದ್ಗೀತೆಯ ಉತ್ತರಭಾಗ. ಗೀತೆಯಲ್ಲಿ ಕೃಷ್ಣನ ಉಪದ್ದೇಶ ಹಾಗೂ ಅರ್ಜುನನ ವಿಷಾದದ ಒಂದೇ ಭಿತ್ತಿಚಿತ್ರ ಮೊದಲಿನಿಂದ ಕೊನೆಯವರೆಗೂ ಮೂಡಿದ್ದರೆ, ಅಪರಾಧ ಹಾಗೂ ಶಿಕ್ಷೆಯಲ್ಲಿ ಒಂದು ಬದುಕಿನ ಮೆರವಣಿಗೆಯೆ ಕಣ್ಣೆದುರು ಸಾಗಿ ಅತ್ಯಂತ, ಮಾರ್ಮಿಕವಾದ ಹಾಗೂ ಕೋಮಲವಾದ ಹಲವು ಭಾವ ಸನ್ನಿವೇಶಗಳು ನಿರ್ಮಿತವಾಗಿ ಜೀವನದ ನಕಲಾದ ಹಲವು ವ್ಯಕ್ತಿಗಳು ರಂಗದ ಮೇಲೆ ಓಡಾಡುತ್ತಾರೆ. ಆದರೆ ಈ ಎರಡರಲ್ಲೂ ರಚನೆಯ ಅಷ್ಟಾದಿಡ್ಡಿತನ ಇದೆ.

ಈ ಎರಡು ಕೃತಿಗಳೂ ಹಲವು ಹತ್ತು ಸ್ವಾರಸ್ಯಕರ ವಿಷಯಗಳನ್ನು ಪ್ರಾಸಂಗಿಕವಾಗಿ ಮುಟ್ಟುತ್ತವೆ, ಒಳಹೋಗುತ್ತವೆ, ಬಳಸುತ್ತವೆ. ಅವುಗಳನ್ನೆಲ್ಲ ಇಲ್ಲಿ ಚರ್ಚಿಸುವ ಅಥವಾ ಗುರುತಿಸುವ ಉದ್ದೇಶ ಇಲ್ಲ. ಉದಾಹರಣೆಗೆ, ಗೀತೆ ಪ್ರತಿಪಾದಿಸುವ ನಿಷ್ಕಾಮಕರ್ಮ ಮನೋಭಾವ, ಚಾತುರ್ವರ್ಣ್ಯ ವಿಭಜನೆ ಹಾಗೂ 'ಅಪರಾಧ ಮತ್ತು ಶಿಕ್ಷೆ'ಯಲ್ಲಿ ಚಿತ್ರಿತವಾಗಿರುವ ಗಿಲ್ಟ್ ಕಾಂಪ್ಲೆಕ್ಸ್, ಮಾನವ, ಅತಿಮಾನವ ವರ್ಗೀಕರಣ. ಆದರೆ ಒಟ್ಟಾರೆ ನೋಡುವುದಾದರೆ ಶ್ರೀಕೃಷ್ಣನಿಗಿಂತ ದೊಸ್ತೋವಸ್ಕಿಯೇ ಹೆಚ್ಚು ಅಧ್ಯಾತ್ಮಿಕತೆಯನ್ನು ಪ್ರತಿಧ್ವನಿಸುತ್ತಾನೆ. ಕೃಷ್ಣನ ಗುರಿ ಬಾಹ್ಯ ರಾಜ್ಯ. ದೊಸ್ತೋವಸ್ಕಿಯ ಗುರಿ ಅಂತರಿಕ ರಾಜ್ಯ. ಇದು ಸಹಜವೂ ಕೂಡ. ಎರಡೂವರೆ ಮೂರು ಸಾವಿರ ವರುಷಗಳ ಹಿಂದೆ ಭಾರತದಲ್ಲಿ ಆಗತಾನೆ ತಲೆ ಎತ್ತಿ ರೂಪು ಧಾರಣೆ ಮಾಡುತ್ತಿದ್ದ ಹಲವಾರು ಸಣ್ಣಪುಟ್ಟ ರಾಜ್ಯಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಒಂದು ಭಾರತದ ಸಾಮ್ರಾಜ್ಯ ಸ್ಥಾಪಿಸುವ ಹುಮ್ಮಸ್ಸಿನಲ್ಲಿ ಯಾವ ಅಡೆತಡೆಯನ್ನೂ ಬದಿಗೆ ಸರಿಸುವ ಕಾಲದ ಆತ್ಮವಿಶ್ವಾಸದ ಐಹಿಕ ಸಿದ್ಧಾಂತ ಗೀತೆಯ ಶಿರಳು. ಮಧ್ಯಯುಗದ ಸಾಮಂತ ಶಾಹಿ ವ್ಯವಸ್ಥೆ ರಷ್ಯಾದಲ್ಲಿ ಕುಸಿದು ಬಿದ್ದು ಸಾಮಂತ ಕುಲೀನರು ನಿರ್ಗತಿಕರು, ನೀತಿಭ್ರಷ್ಟರು, ರೋಗಿಷ್ಟರು, ದಿಶಾಹೀನರು ಆಗಿದ್ದ ಅವನತಿಯ ಕಾಲದ ಪಾರಮಾರ್ಥಿಕ ಸಿದ್ಧಾಂತ ಅಪರಾಧ ಮತ್ತು ಶಿಕ್ಷೆಯ ಪಲ್ಲವಿ. ಪ್ರಾಸಂಗಿಕವಾಗಿ ದೊಸ್ತೊವಸ್ಕಿಯನ್ನು ಕುರಿತು ಸ್ಟಾಲಿನ್ನನ ಮಾತನ್ನು ಇಲ್ಲಿ ಉದ್ಧರಿಸಬಹುದು "ದೋಸ್ತೊವಸ್ಕಿ ಬಲು ದೊಡ್ಡ ಲೇಖಕ. ಆದರೆ ಬಲು ದೊಡ್ಡ ಪ್ರತಿಗಾಮಿ......ಆದರೆ ಬಲು ದೊಡ್ಡ ಲೇಖಕ."

ಈ ಎರಡೂ ಪ್ರಸಂಗಗಳನ್ನೂ ನಾವು ಆಧುನಿಕ ಪರಿಸರದಲ್ಲಿಟ್ಟು ಹೀಗೆ ವೃತ್ತಾಂತೀಕರಿಸಬಹುದು. ಕೃಷ್ಣನಂಥ ಒಬ್ಬಾತ ತುಂಬ ಕಷ್ಟ ಕಾರ್ಪಣ್ಯ, ಹತಾಶೆಗೊಳಗಾಗಿದ್ದ ತನ್ನ ಒಬ್ಬ ಆಪ್ತನಿಗೆ ಹೀಗೆ ಹುರಿದುಂಬಿಸಬಹುದು : "ನಿನ್ನ ಪಾಲಿನ

ಆಸ್ತಿಗೆ ಯಜಮಾನನಾಗಿರುವ ನಿನ್ನ ಅಣ್ಣ ಮೋಸಗಾರ, ದುಂದುಗಾರ, ಅಸಮರ್ಥ. ನೀನಾದರೋ ಹೆಂಡತಿ, ಮಕ್ಕಳು ಮರಿ ಇರುವ ಸಂಸಾರಿ. ಆದರೆ ವ್ಯವಹಾರದಲ್ಲಿ ಅಮಾಯಕ. ನಿನ್ನ ಆಸ್ತಿಯ ಪಾಲನ್ನು ಅವನು ಅನ್ಯಾಯದಿಂದ ಒಳಹಾಕಿಕೊಂಡಿದ್ದಾನೆ. ಅವನನ್ನು ಉಪಾಯಾಂತರದಿಂದ ನೀನು ಕೊಲ್ಲು, ಅದು ಅಧರ್ಮವಾಗದು ಅಲ್ಲದೆ, ನಾನು ಸುಪ್ರಸಿದ್ಧ ವಕೀಲ. ನಿನ್ನನ್ನು ಕಾನೂನಿನ ನೇಣು ಗಂಬದಿಂದ ಉಳಿಸಬಲ್ಲೆ. ಅನುಮಾನವಿದ್ದರೆ ನಾನು ನ್ಯಾಯಾಲಯದಲ್ಲಿ ಗೆದ್ದಿರುವ ಇಂಥ ಮೊಕದ್ದಮೆಗಳ ಪಟ್ಟಿಯನ್ನೇ ನೋಡು". ಇದು ಭಗವದ್ಗೀತೆಯ ಪ್ರಸಂಗದ ಇಂದಿನ ಅವತರಣಿಕೆ. ಹಾಗೆಯೇ ಸಮಾಜಕಂಟಕನಾದ ದುಷ್ಟನೊಬ್ಬನನ್ನು ಸದುದ್ದೇಶಕ್ಕಾಗಿ ಕೊಂದು ಪೊಲೀಸರ ಎಲ್ಲ ವಿಧದ ತನಿಖೆಯಲ್ಲೂ ಪತ್ತೆಯಾಗದೆ ತನ್ನ ಒಳತೋಟಿಯ ಮೂಲಕ ಅಂತಃಪ್ರೇರಣೆಯಿಂದ ನಿವೇದನೆ ಮಾಡಿಕೊಂಡು ಶಿಕ್ಷೆಯನ್ನೂ ಸ್ವೀಕರಿಸುವ ಆಧುನಿಕ ಯುವಕನನ್ನೂ ಕಲ್ಪಿಸಿಕೊಳ್ಳಬಹುದು. ಈ ಎರಡು ಅವತರಣಿಕೆಗಳೂ ಅಷ್ಟೇನೂ ಅಪರೂಪವಲ್ಲ. ಅಂತೆಯೇ ಈ ಎರಡೂ ಕೃತಿಗಳ ದೇಶ ಕಾಲಾತೀತ ಮಹತ್ವ.

ಈ ಸಂದರ್ಭದಲ್ಲಿ ಥಿಯೋಡರ್ ಡ್ರೇಜರನ 'ಅನ್ ಅಮೆರಿಕನ್ ಟ್ರಾಜೆಡಿ' ನೆನಪಿಗೆ ಬರುವುದು ಸಹಜ. ಅಲ್ಲಿನ ಹೀರೊ ತನ್ನ ಪ್ರೇಯಸಿಯನ್ನು ತನ್ನ ಪ್ರಾಪಂಚಿಕ ಪ್ರಗತಿಗಾಗಿ ಕೊಲೆಮಾಡಿದನೇ ಎಂಬುದು ಅನುಮಾನಾಸ್ಪದ. ಆದರೆ ಮಾಡಲು ಆಲೋಚಿಸಿರುತ್ತಾನೆ. ಅವಳು ಸತ್ತಿರುತ್ತಾಳೆ, ಅವನಿಗೆ ಶಿಕ್ಷೆಯಾಗುತ್ತದೆ. ಡ್ರೇಜರನ ತಾತ್ಪರ್ಯ, ಅಪರಾಧಿ ಸಮಾಜ ; ವ್ಯಕ್ತಿ ಯಜ್ಞಪಶು. ಇದು ಅಮೆರಿಕದ ಬಂಡವಾಳಷಾಹಿ ಸಮಾಜದ ಭರ್ತ್ಸನೆ.

ಹಿಂಸೆಯನ್ನು ಸ್ಫಟಿಕ ಸ್ಪಷ್ಟವಾಗಿ ಸಮರ್ಥಿಸುವ ಭಗವದ್ಗೀತೆಯಲ್ಲಿ ಅಹಿಂಸೆಯ ಸಂದೇಶವನ್ನೂ ಕಂಡುಕೊಂಡ ಗಾಂಧೀಜೀಯ ವ್ಯಾಖ್ಯಾನದ ವಕೀಲಿ ಚಾತುರ್ಯವನ್ನು ಕಂಡು ನಾವು ಕೌ...ಕಪಡಬಹುದಷ್ಟೆ !

  

ತಿಂಗಳಕಾವ್ಯ

## ಆರ್ತ - ಗೀತ

ಅಹೋ ರಾತ್ರಿ ಹುಡುಕಾಡಿದೆ, ಸಿಗಲಿಲ್ಲ...
ಪ್ರಶ್ನೆಗಳ ಕಾರ್ಮೋಡ ಕಂಡಿತೇ ವಿನಾ ಉತ್ತರಗಳ ಮಳೆ ಸುರಿಯಲಿಲ್ಲ...

ಹೊಂಬಿಸಿಲ ಬಾನ ಕಂಡು ಹರಿದ್ವರ್ಣ ಕಾಡ ಕಂಡು
ಅಸ್ತವ್ಯಸ್ತ ಕೋಲಬ ಕಂಡು
ಬಣ್ಣದಲ್ಲಿ ಬಯಲಿನಲ್ಲಿ ಧೂಳಿನಲ್ಲಿ ಗಲಿಬಿಲಿಗೊಂಡು
ಅಖಂಡ ಪ್ರಶ್ನೆಗಳ ದಂಡು ದಂಡನ್ನೇ ಕಂಡೆ,
ಹಿಂಡು ಹಿಂಡು ಉತ್ತರಗಳ ಆಗಮನವೇ ಇಲ್ಲ...
ಹುಡುಕಾಟ ನಡೆದಷ್ಟೂ ಪಥ ಕ್ರಮಿಸಿದಷ್ಟೂ ಜೀವ ನವೆದಷ್ಟೂ
ಪಯಣ ಪಾಯಸ ಹಣಿಸಲಿಲ್ಲ ತಲ್ಪ ಕರುಣಿಸಲಿಲ್ಲ
ಜೊನ್ನ ಬೆಳದಿಂಗಳನೂ ಉಣಿಸಲಿಲ್ಲ ಸ್ವಪ್ನ ತಿನಿಸೂ ದಕ್ಕಲಿಲ್ಲ
ಬಯಕೆ ಹಾದಿಯ ತುಂಬ ಇಕ್ಷುಸಾಗರ ಸಹ ಉಕ್ಕಲಿಲ್ಲ...
ಸಿಕ್ಕಿದ್ದು ಒಂದೇ... ಸಿಕ್ಕುತ್ತಾ ಸ್ಪಷ್ಟವಾದದ್ದು ಒಂದೇ...
ಅಪರಾಹ್ನದ ಹೊತ್ತಿಗೆ ಸಹಿಸಲಾಗದ ಅಗ್ನಿದೀಪನ
ಮತ್ತೆ ಮತ್ತೆ ಎಲ್ಲ ಬುದ್ಧಿ ಬಲ ಮೆಟ್ಟಿ ತೀವ್ರವಾದದ್ದೊಂದೇ...
ಅಗ್ನಿ ದೀಪನದ ಪುನರಾವರ್ತನ !

ಆಕುಲಿತ ಮನೋಮಂಡಲದಲ್ಲಿ ಮುಗಿಯದಾತಪ
ನಡೆಸಿದೆ ದಾಳಿ. ಹಳ್ಳಿಯಿಂದ ದಿಲ್ಲಿಯವರೆಗೆ ಹೋಗಿ ಬಂದದ್ದಾಯ್ತು
ಕನ್ಯಕುಮಾರಿ ಕಂಡರೂ ಬೆಳ್ಳಿ ಬೆಟ್ಟದ ಮಿರುಗಿನಲ್ಲಿ ಆನಿಸಿ ನಿಂತರೂ
ಸಿಗಲಿಲ್ಲ ಉತ್ತರ ಸಂಹಿತೆ;
ಎಲ್ಲ ಕಂತೆ ಕಂತೆ ಪ್ರಶ್ನೆಮಾಲೆಗಳ ಸಂತೆ.

ಜ್ಞಾನನಿಧಿ ಸುಳಿವಿಲ್ಲ... ಇದ್ದರೂ ಈ ಮನುಜ ಬುದ್ಧಿಗೆ
ಆದರ ಅವಲಂಬನದ ಪ್ರಭಾವಳಿ ಪೂರ ಅರಿವಿಲ್ಲ...
ಎಲ್ಲ ಅರಿವಿನಾಚೆ ನೆಲೆ ನಿಂತ ಅವಲೋಕನವಿಲ್ಲ.
ಅವಿಚ್ಛಿನ್ನ ತಾಳ್ಮೆ ಪ್ರತೀಕ್ಷೆ ಕಾಣದೆ ಉತ್ತರಗಳ ತವನಿಧಿ ಗೋಚರಿಸಲಿಲ್ಲ;

ಸಾಧನೆ ಸುಖದ ದೀಪ್ತ ಆವಾಸಸ್ಥಾನದಲ್ಲಿ
ಜ್ಯೋತಿರ್ಮಾಲೆ ದೀಪೋತ್ಸವ ಆಚರಿಸಲಿಲ್ಲ... ಈ ಬದುಕಿನಲ್ಲಿ
ಬವಣೆ ಮುಗಿಯುವುದಿಲ್ಲ... ಸಾಮಾನ್ಯನ ಪಾಡು ನಿಲ್ಲುವುದಿಲ್ಲ
ಅನುದಿನದ ಸಂಕಷ್ಟದ ಗಾರುಗಾರಾದ ಪಾಡು
ಹೊಸ ಹೊಡ ಅನುರಣಿಸುವುದಿಲ್ಲ... ಇಲ್ಲಿ ನವನವೀನ ಸೂರ್ಯ
ಕೆಂಬಣ್ಣದಿಂದ ಮೂಡುವುದಿಲ್ಲವೇಬೆಲ್ಲ ನೈರಾಶ್ಯದಗ್ನಿಕುಂಡ
ಭುಗಿಲಾಗಿ ಬೆಳೆದು ಹದಿಹರೆಯದಲ್ಲೇ ಸಾವು ತಪ್ಪುವುದಿಲ್ಲ
ಇದನ್ನೆಲ್ಲ ಸುವರ್ಣಾಕ್ಷರದ ಚರಿತ್ರೆ ಕ್ಷತಾಂಕಗಳಲ್ಲಿ ಕೆತ್ತುವುದಿಲ್ಲ
ಇಲ್ಲ...ಇಲ್ಲ...ಇಲ್ಲಿ ನವೋನವೋನ್ಮೇಷ ಶಾಲಿನಿ ಜೀವನಿ ಪಲ್ಲವಿಸುವುದಿಲ್ಲ!

—ದೊಡ್ಡರಂಗೇಗೌಡ

## ನಾವೂ ಬದುಕಿದ್ದೇವೆ...

ಸಂಭೋಗವಿಲ್ಲದೆ ಮೊಟ್ಟೆ ಕೊಡುವ ಕೋಳಿಗಳ
ಫಾರಂ ಮೊಟ್ಟೆಗಳು
ಒಡೆದಲ್ಲೇ ಆಮ್ಲೆಟ್ ಆಗಿ ಅಂತ್ಯವಾಗುವ
ಈ ಅಸ್ತಿತ್ವ
ಕಾವುಕೊಟ್ಟರೂ ಕಾಲಸವೆಯುವತನಕ
ಮೊಟ್ಟೆ ಒಡೆಯುವುದಿಲ್ಲ
ಮರಿ ಹೊರಬರುವುದಿಲ್ಲ

ಭ್ರೂಣ ಬತ್ತಿ ಬೆಂದು ಆವಿಯಾಗಿ
ಬುಡ ಅಂಟಾಗಿ ಹೊಳೆದು
ಭದ್ರವಾಗಿ ಛಿದ್ರವಾದರೂ
ಕೋಳಿ ಕೊರಲೆತ್ತಿ ಕೊಕ್ಕೊ ಕ್ಕೋ... ಕೋ
ಕೂಗಲಿಲ್ಲ... ಕೂಗುತ್ತಿಲ್ಲ...???

ಜಡ್ಡು ಹಿಡಿದ ನಿರಂತರ ನಿಶ್ಚಿಂತೆಯ ಕನಸಲ್ಲ
ಆಗುತ್ತಲಿದೆ ಸಾವಿರಾರು ಗರ್ಭಪಾತ
ಅಳವಾಗುತ್ತಿದೆ ನಿರ್ವಿಕಾರಪ್ರಪಾತ
ಎರಡು ಭ್ರೂಣ ಬಾಹಿರ ಪದಗಳ ಮಧ್ಯೆ
ನೀರಾಗಿಯೇನಿಂತು
ನೀರಿನಂತೆ ಆಕಾರ ಪಡೆಯುತ್ತೇವೆ
ಆಕೃತಿಗೆ ತಕ್ಕಂತೆ
ಒತ್ತಡ ಉಷ್ಣತೆಗೆ ಹದವಾಗಿ

ಇವು ಮುಂದುವರೆದ ಜೀವಜಾತಿ
ಅಮ್ನಿಯೋಟ!!!
ಎಂದು ಥಟ್ಟನೆ ಹೊಳೆದಾಗ
ಅನಿಸುತ್ತದೆ
ನಾವೂ ಬದುಕಿದ್ದೇವೆ ಜೀವಿಗಳಾಗಿ
ಜೀವಿಗಳ ಮಧ್ಯೆ
ಯಾವುದೋ ಒಂದು ಸ್ಥರದಲ್ಲಿ
ಸ್ವರವಿಲ್ಲದ ನಿಶ್ಯಬ್ದ ಶಬ್ದಗಳೊಡನೆ
ನಿಷ್ಕ್ರಿಯ ಒಪ್ಪಂದದ ಕಂದರದಲ್ಲಿ

—ಶೇಷಗಿರಿ ಜೋಡಿದಾರ

ಸಮಾಜದ ಅತ್ಯಂತ ಮೂಲಭೂತ ಘಟಕವಾದ 'ಕುಟುಂಬ'ದಲ್ಲಿನ ಸ್ಥಿರತೆ ಮತ್ತು ಶಾಂತಿಯುತ ಸ್ಥಿತಿಗೆ ಗಂಡ-ಹೆಂಡಿರಿಬ್ಬರೂ ಒಟ್ಟಾಗಿ ಬದುಕುವುದು ಮುಖ್ಯ. ಮಹಿಳೆಯೂ ಉದ್ಯೋಗಕ್ಕೆ ಹೊರಟಿರುವುದರಿಂದ ಹಿಂದೆಂದಿಗಿಂತ ಇಂದು ಅನೇಕ ಸಮಸ್ಯೆಗಳನ್ನು ಅವಳು ಎದುರಿಸಬೇಕಾಗಿದೆ. ಅದ್ದರಿಂದಲೇ ಗಂಡ-ಹೆಂಡಿರ ವರ್ಗಾವಣೆಯೂ ಒಂದು ಸಮಸ್ಯೆಯಾಗಿದೆ. ಆದರೆ ಈ ಸಮಸ್ಯೆ, ವಿಜಯಾರವರು ಭಾವಿಸಿರುವಷ್ಟು ಇಡೀ ಆಡಳಿತಯಂತ್ರವನ್ನೇ ತಲೆಕೆಳಗು ಮಾಡುವಂತಹ ದೊಡ್ಡ ಸಮಸ್ಯೆಯಲ್ಲವೆಂದು ನನಗನ್ನಿಸುತ್ತದೆ.

'ಸಮಸಮವಾಗಿ ದುಡಿಯಬಯಸುವಿರಾದರೆ ಹೆಣ್ಣೆಂಬ ಕಾರಣಕ್ಕಾಗಿ ಯಾವ ಸವಲತ್ತು ಕೇಳಬೇಡಿ' ಎನ್ನುವ ವಿಜಯಾರವ ದೃಷ್ಟಿಯಲ್ಲಿ ಸ್ತ್ರೀಯರು ಹೆರಿಗೆ ರಜ, ಹೆರಿಗೆ ಭತ್ಯೆಯನ್ನು ಕೇಳುವುದು 'ಭಿಕ್ಷೆ'ಯಾಗಿ ಪರಿಣಮಿಸುತ್ತದೆ ಮತ್ತು ಇಂತಹವುಗಳಿಗಾಗಿ ಚಳುವಳಿ ಮಾಡುವವರು 'ಅಸಹಾಯಕತೆಯನ್ನು ಹೆಗ್ಗಳಿಕೆ'ಯನ್ನಾಗಿ ಮಾಡಿಕೊಂಡವರೂ 'ವೃಥಾ ಘೋಷಣೆಹಾಕಿ ಸಮಸ್ಯೆ ಹೇಳುವವರೂ' ಆಗಿ ಬಿಡುತ್ತಾರೆ ಮಹಿಳೆಯೊಬ್ಬಳು ಮಗುವನ್ನು ಹೆತ್ತಾಗ ಅದು ಅವಳೊಬ್ಬಳ ಆಸ್ತಿ ಮಾತ್ರವಾಗಿರದೆ ಇಡೀ ಸಮಾಜದ ಆಸ್ತಿಯಾಗುವುದರಿಂದ, ಮಹಿಳೆಗೆ ಕೊಡುವ ಹೆರಿಗೆ ರಜ, ಹೆರಿಗೆ ಭತ್ಯೆ ಸಮಾಜ ನಿರ್ವಹಿಸುತ್ತಿರುವ ಸಾಮಾಜಿಕ ಜವಾಬ್ದಾರಿಯನ್ನು ತೋರಿಸುತ್ತದೆಯೇ ವಿನಃ ಸಮಾಜ ಹೆಣ್ಣಿಗೆ ಕೊಡುತ್ತಿರುವ ಭಿಕ್ಷೆಯನ್ನಲ್ಲ, ಅದಕ್ಕಾಗಿ ಅವಳು ಅಂಗಲಾಚಬೇಕಿಲ್ಲ. ಅಷ್ಟೇ ಅಲ್ಲ, ಮಹಿಳೆ ವಿವಾಹಿತಳಿರಲಿ, ಇಲ್ಲದಿರಲಿ, ಗರ್ಭಿಣಿಯಾದರೆ ಈ ಸೌಲಭ್ಯ ದೊರಕುವಂತೆ ಮಾಡುವ ಕಾನೂನು ಜಾರಿಗೆ ಬರಲು ಹೋರಾಟ ನಡೆಸಬೇಕು. ಕೂಲಿ ಕೆಲಸದವರು-ಕಲ್ಲು ಕುಟ್ಟುವವರೂ-ಯಾರಿಗೂ ಅಷ್ಟಿಲ್ಲ ಆಗದ ರಿಯಾಯತಿ ಉಳಿದವರಿಗೇಕೆ ? ಎಂದು 'ವ್ಯಾಪಾರಿಬುದ್ಧಿ'ಯಿಂದ ಪ್ರಶ್ನಿಸಿದರೆ ಆ ಮಾತುಗಳು 'ಹೃದಯಹೀನ' ಎಂದೆನಿಸದೆ, ಅಂತಹ ಜಾಣತರ್ಕಕ್ಕೆ ನಗಬೇಕೆನಿಸುತ್ತದೆ. ಸಮಾಜವಾದಿ ರಾಷ್ಟ್ರಗಳಲ್ಲಿ ಹೆರಿಗೆ ರಜದ ಅವಧಿಯನ್ನು ವಿಸ್ತರಿಸುವುದರ ಹಿಂದಿನ ಆಶಯವನ್ನು ಇಲ್ಲಿ ವಿಜಯಾರವರು ದಯವಿಟ್ಟು ಗಮನಿಸಬೇಕು. ಇಲ್ಲಿ ಒಂದು ವಿಷಯ ನೆನಪಿಗೆ ಬರುತ್ತದೆ-ಮಹಿಳೆಯರ ಮೇಲಿನ ಅತ್ಯಾಚಾರಗಳು ಹೆಚ್ಚು ಕೇಳಿಬರುತ್ತಿರುವ ಇಂದಿನ ದಿನಗಳಲ್ಲಿ ಮಹಿಳಾ ಅಪರಾಧಿಗಳೊಂದಿಗೆ ವರ್ತಿಸಬೇಕಾದ ಪೋಲೀಸ್ ನಿಯಮಗಳು ಪುರುಷರಿಗಿಂತ ಭಿನ್ನವಾದ ರೀತಿಯಲ್ಲಿರಲು ಮಹಿಳಾ ಸಂಘಟನೆಗಳು ಒತ್ತಾಯಿಸುತ್ತಿವೆ. ಸ್ತ್ರೀ ಪುರುಷರ ಸಮಾನತೆಯ ಬಗ್ಗೆ ಮಾತನಾಡುವ ವಿಜಯಾರವರು ಈ ವಿಷಯಕ್ಕೆ ಏನು ಹೇಳುತ್ತಾರೆ ? ಸ್ತ್ರೀ ಪುರುಷರಿಬ್ಬರಿಗೂ ಅನ್ವಯಿಸಬಹುದಾದ ಸಮಸ್ಯೆಗಳನ್ನು 'ಮಹಿಳೆಯರ ಸಮಸ್ಯೆ'ಗಳು ಎಂದಷ್ಟೇ ಭಾವಿಸುವ ವಿಜಯಾರವರು ಹಲವು ವೇಳೆ ಗೊಂದಲ

ಕ್ಕೊಳಗಾಗುತ್ತಾರೆ. ಗಂಡ ಹೆಂಡತಿಯರ ಕೆಲಸದ ವರ್ಗಾವಣೆಯ ಸಮಸ್ಯೆ ಕೇವಲ ಮಹಿಳೆಯ ಸಮಸ್ಯೆಯಂತೂ ಆಗುವುದಿಲ್ಲ. 'ಸುಳ್ಳು ಸುಳ್ಳೇ ಪ್ರಗತಿಪರ ಘೋಷಣೆ ಕೂಗಿ ತನ್ನನ್ನೇ ತಾನು ಅಪಹಾಸ್ಯಕ್ಕೆ ಗುರಿಮಾಡಿ'ಕೊಳ್ಳುವಂತಹ ಕೆಲಸವನ್ನು ಸ್ತ್ರೀಯರೇಕೆ ಪುರುಷರು ಮಾಡಿದರೂ ಕೂಡ ಅದಕ್ಕೆ ನನ್ನ ವಿರೋಧವಿದೆ.

ಆತ್ತೆ, ಗಂಡನ ಮಾತಿಗೆ ತಲೆದೂಗಿ, ಆರಾಮಾಗಿ ತೊಟ್ಟಿಲು ತೂಗುತ್ತಾ ಗೃಹಕೃತ್ಯವೇ ತನ್ನ ಜೀವನದ ಸಾರಸರ್ವಸ್ವ ಎನ್ನುವ, ಕೊರಳು ಕೊಂಕಿಸಿ, ಹುಬ್ಬು ಕಾಣಿಸಿದರೆ ಹಿಂದೆ ಬರುವ ಗಂಡಸರಿದ್ದಾರೆಂದು ತನ್ನ ಕೆಲಸ ಸುಲಭಮಾಡಿಕೊಳ್ಳುವ. ಸಾರ್ವಜನಿಕ ಜೀವನದ ಚಟುವಟಿಕೆಗಳಾವುವೂ ತನ್ನದೆಂದುಕೊಳ್ಳದೆ, ಒಡವೆ, ಸೀರೆ, ಅಡಿಗೆ—ಇಷ್ಟರಲ್ಲೇ ಮುಳುಗಿ ತೇಲುವ ಉದ್ಯೋಗಸ್ಥ ಮಹಿಳೆಯರ ಬಗೆಗೂ ನನಗೆ ತೀರ ಅಸಮಾಧಾನ ಹಾಗೂ ಜಿಗುಪ್ಸೆ ಇದೆ. ಇಂತಹ ಅಪಾಯಕಾರಿ ಮೌಲ್ಯಗಳನ್ನೇ ಚಿತ್ರಿಸುವ ಸಮೂಹ ಮಾಧ್ಯಮಗಳು ಮತ್ತು ಕಲಾಮಾಧ್ಯಮಗಳನ್ನು ಬಳಸಿಕೊಂಡು ಇಂತಹ ಧೋರಣೆಯ ಬದಲಾವಣೆಗೆ ಶ್ರಮಿಸಬೇಕು.

ನಿಜವಾಗಿಯೂ ಬದುಕಿನಲ್ಲಿ ತುತ್ತಿಗಾಗಿ ಬವಣೆಪಡುತ್ತಿರುವ ಸೋದರಿಯರ ಬೌದ್ಧಿಕ ಬೆಳವಣಿಗೆಯೂ ಆಗಬೇಕೆಂದು ಕಾಳಜಿಯಿಂದ ಮಾತನಾಡುವ ವಿಜಯಾರವರ ಸಾಮಾಜಿಕ ಪ್ರಜ್ಞೆ ಮತ್ತು ವಾಸ್ತವ ಸತ್ಯದ ಅರಿವಿನ ಬಗ್ಗೆ ನನಗೆ ಕೆಲವೊಂದು ಸಂದೇಹಗಳುಂಟಾಗುತ್ತವೆ. ಎರಡು ಹೊತ್ತಿನ ಊಟ ಸಂಪಾದಿಸಲು ನಿರತರಾದವರೂ ತಮ್ಮ ಸುತ್ತಮುತ್ತಣ ಸಮಸ್ಯೆಗಳನ್ನು ಅರಿಯುವಂತೆ ಮಾಡಬೇಕಾದರೆ, ಅದಕ್ಕೆ ಸಂಘಟಿತ ಹೋರಾಟ ಅಗತ್ಯವಾಗಿ ಬೇಕು ಎನ್ನುವುದನ್ನು ವಿಜಯಾರವರು ಮರೆಯುವರೆ ? ಹೆಣ್ಣು ಗಂಡು ಲಿಂಗ ಭೇದವಿಲ್ಲದೆ ಕೇವಲ ವೃತ್ತಿ, ವಿದ್ಯೆ, ನಿಷ್ಠೆಗೆ ಮಹತ್ವದ ಸ್ಥಾನ ಬರುವ ಹಾಗೆ ಹೆಣ್ಣು ಎಂದು ತನ್ನ ವಾತಾವರಣವನ್ನು ರೂಪಿಸಿಕೊಳ್ಳುತ್ತಾಳೋ ಅಂದು ಆಕೆ ಸಾಮಾಜಿಕ ಜವಾಬ್ದಾರಿಯ ನಿರ್ವಹಣೆಯಲ್ಲಿ ನಿಜವಾಗಿ ಪಾತ್ರವಹಿಸಿದ ಹಾಗೆ ಎನ್ನುವ ವಿಜಯಾರವರ ಆದರ್ಶಸ್ಥಿತಿಯ ನಿರ್ಮಾಣವೇ ನನ್ನ ಆಶಯವೂ ಕೂಡ, ಆದರೆ ಇಂತಹ ಸ್ಥಿತಿ ಒದಗಲು ಮಹಿಳೆಯರಿಗಿರಬಹುದಾದ ಅಡೆತಡೆಗಳು ಮತ್ತು ಅವಳ ಮಿತಿಗಳು-ಈ ಎರಡರ ಸಮತೋಲನದೊಂದಿಗೆ ಆಕೆ ನಡೆಸಬೇಕಾದ ನಿರಂತರ ಹೋರಾಟದ ನೆನಪನ್ನು ನಾನು ವಿಜಯಾರವರಿಗೆ ಮಾಡಿಕೊಡಲು ಬಯಸುತ್ತೇನೆ. ಇಲ್ಲದಿದ್ದರೆ ಇಂತಹದೊಂದು ಸ್ಥಿತಿಯನ್ನು ಆಶಿಸುವುದು ಭ್ರಾಮಕ ಲೋಕದ ಸುಂದರ ಕನಸಾಗಬಹುದು ಅಷ್ಟೆ.

# ಚರಿತ್ರೆಯಲ್ಲಿ ನೆನಪಿಡಬೇಕಾದ 'ಜಾಥಾ'

1980 ಚರಿತ್ರೆಯಲ್ಲಿ ನೆನಪಿಡಬೇಕಾದ ವರ್ಷ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮೊದಲನೆಯ ಬಾರಿಗೆ ರೈತರು ತಮ್ಮ ಕಷ್ಟ ಕಾರ್ಪಣ್ಯಗಳನ್ನು ಕುರಿತು ಸಾಮೂಹಿಕವಾಗಿ ಚಿಂತಿಸಿದ ವರ್ಷ. ಇದರ ಇತಿಮಿತಿಗಳು ಏನೇ ಇರಲಿ ಸರ್ಕಾರಕ್ಕೆ ಸವಾಲಾದ ಹೋರಾಟ. ತಮಿಳುನಾಡಿನಲ್ಲಿ ಪ್ರಾರಂಭವಾದ ಈ ಚಳವಳಿ ಇಂದು ಇಡೀ ಭಾರತದ ರೈತನ ಕಣ್ಣು ತೆರೆಸಿದೆ. ನಾವು ಕೂಡಿ ಹೋರಾಡದೆ ಜೀವಂತವಾಗಿರಲು ಸಾಧ್ಯವಿಲ್ಲವೆಂದೂ ತಿಳಿಯುವ ಅವಕಾಶ ದೊರಕಿದೆ. ಈ ದೃಷ್ಟಿಯಿಂದ ಕರ್ನಾಟಕದ ಸಂದರ್ಭಕ್ಕೆ ಬಂದಾಗ ಉತ್ತರ ಕರ್ನಾಟದ ಕೆಲವು ಪ್ರದೇಶಗಳಲ್ಲಿ ಇದು ವ್ಯಾಪಕವಾಗಿ ರೈತರ ಮನಸ್ಸನ್ನು ಸೂರೆಗೊಂಡಿತು. ಅಲ್ಲಿ ಸಂಭವಿಸಿದ ಸಾವು-ನೋವುಗಳನ್ನು ಇಲ್ಲಿ ವಿವರಿಸಬೇಕಾಗಿಲ್ಲ. ಸರ್ಕಾರ ಇಲ್ಲಿ ನಡೆಸಿದ ದಬ್ಬಾಳಿಕೆ ರೈತರ ಹೋರಾಟದ ಶಕ್ತಿಯನ್ನಂತೂ ಕುಗ್ಗಿಸಲಿಲ್ಲ. ನಂತರ ಕೆಲವೇ ದಿನಗಳಲ್ಲಿ ಕರ್ನಾಟಕದ ವಿವಿಧ ಮೂಲೆಗಳಲ್ಲಿ ಈ ಹೋರಾಟ ತನ್ನ ಕೂಗನ್ನೆಬ್ಬಿಸಿತು. ಇದರ ಪರಿಣಾಮವಾಗಿ ಶಿವಮೊಗ್ಗ ಜಿಲ್ಲೆಯಲ್ಲಿ ನಡೆದ ರೈತರ ಹೋರಾಟ ಅದರ ರಾಜಕೀಯ ಇತಿಮಿತಿಗಳಲ್ಲೂ ಮಹತ್ವಪೂರ್ಣ ಹೋರಾಟವಾಗಿದೆ.

ತಮಿಳುನಾಡಿನಂತೆ, ಮಹಾರಾಷ್ಟ್ರದಲ್ಲೂ ರೈತರು ನಡೆಸಿದ-ನಡೆಸುತ್ತಿರುವ ಹೋರಾಟ ಇಂಡಿಯಾದ ರಾಜಕೀಯ ಸಂದರ್ಭದಲ್ಲಿ ತುಂಬ ಮಹತ್ವಪೂರ್ಣವಾದದ್ದು. ಈ ದೃಷ್ಟಿಯಿಂದ ಕರ್ನಾಟಕದಲ್ಲಿ ಕೆಲವು ರಾಜಕೀಯ ಪಕ್ಷಗಳು ಕೂಡಿಕೊಂಡು ನಡೆಸಿದ ಸಾಂಸ್ಕೃತಿಕ ಜಾಥಾ ಕರ್ನಾಟಕದ ಇತಿಹಾಸದಲ್ಲಿ ಚಿನ್ನದ ಅಕ್ಷರಗಳಲ್ಲಿ ಬರದಿಡಬೇಕಾದ ಸಂಗತಿ. ಈ ಒಟ್ಟು ಹೋರಾಟದಿಂದ ಇದರ ಬಗೆ ಪ್ರಜ್ಞೆಯೂ ಇಲ್ಲದ ರೈತನೂ ತನ್ನ ಸುತ್ತ ಮುತ್ತ ಏನು ನಡೆಯುತ್ತಿದೆ ಮತ್ತು ಯಾಕೆ ನಡೆಯುತ್ತಿದೆ ಎಂಬುದನ್ನು ಕುರಿತು ಚಿಂತಿಸಲು ಸಾಧ್ಯವಾಗುತ್ತಿದೆ ಅನ್ನಿಸುತ್ತೆ. ಇದಕ್ಕೆ ಪೂರಕವಾಗಿ ಜನವರಿ 5ರಂದು ಬೆಂಗಳೂರಿಗೆ ಬಂದ ಈ 'ಜಾಥಾ'ಕ್ಕೆ ದೊರೆತ ಸ್ವಾಗತ ಅತ್ಯದ್ಭುತವಾಗಿತ್ತು. ರಾಜ್ಯದ ಬೇರೆ ಬೇರೆ ಮೂಲೆಗಳಿಂದ ಬಂದ 'ಜಾಥಾ'ಗಳು ಸುಭಾಷ್‌ನಗರದ ಮೈದಾನದಲ್ಲಿ ನೆರೆದವು. ಅಲ್ಲಿಂದ ಬೆಂಗಳೂರು ನಗರದ ಬೇರೆ ಬೇರೆ ರಸ್ತೆಗಳಲ್ಲಿ ಹೋದ ರೈತರ ಮೆರವಣಿಗೆ-ಅವರಿಗೆ ಜನರಿಂದ ದೊರೆತ ಸ್ವಾಗತ ನೆನಪಿನಿಂದ ಕಿತ್ತುಕೊಳ್ಳಲಾಗದಂಥದ್ದು. ಮತ್ತೊಂದು ಮುಖ್ಯ

ವಿಷಯವೆಂದರೆ-ವಿದ್ಯಾರ್ಥಿಗಳು, ಕಾರ್ಮಿಕರು, ಮತ್ತು ಬೆಂಗಳೂರಿನ ನಾಗರೀಕರು ಪರಕೀಯರಾಗದೆ ಇದರಲ್ಲಿ ಪಾಲ್ಗೊಂಡ ರೀತಿಯನ್ನು ಮರೆಯುವಂತಿಲ್ಲ. ಈ ಸಮಯದಲ್ಲಿ ಅಭಿಮಾನಿಗಳು ತಮ್ಮ ಮನೆಗಳ ಮುಂದೆ ಸಾರಿಸಿ, ರಂಗೋಲೆ ಇಟ್ಟು ತಿಂಡಿಯ ಪೊಟ್ಟಣಗಳನ್ನು ಹಾಗೂ ನೀರು ಮಜ್ಜಿಗೆಯನ್ನು ಕೊಡುವಲ್ಲಿಯ ಉತ್ಸಾಹದ ಹಿಂದಿರುವ ಕಳವಳಿಯನ್ನು ಹೇಗೆ ಮರೆಯಲು ಸಾಧ್ಯ. ಇದನ್ನೆಲ್ಲ ನೋಡಿದಾಗ ನಾನು ಬ್ಯಾಂಕಿಗೆ ಚಕ್ಕರ್ ಹೊಡೆದದ್ದು ಸಾರ್ಥಕವಾಯಿತೆನ್ನಿಸಿತು. ಹಾಗೆಯೇ ಕೆನರಬ್ಯಾಂಕ್ ಮತ್ತು ಎಲ್.ಐ.ಸಿ. ಮುಂದೆ ಬಂದಾಗ ನೊಂದ ಕಾರ್ಮಿಕರು ಹೂವಿನ ಸುರಿ ಮಳೆಯನ್ನು ಕರೆದರು. ಈ ರೀತಿ ಮಾಡಿ ಎಂದು ಆಡಳಿತ ಪಕ್ಷದವರ ರೀತಿಯಲ್ಲಿ ಯಾರಿಗೂ ದುಡ್ಡು ಕೊಟ್ಟಿರಲಿಲ್ಲ. ಇದೇ ರೀತಿಯಲ್ಲಿ ರಿಸರ್ವ್‌ಬ್ಯಾಂಕಿನ ನೌಕರರು ಸ್ವಾಗತಿಸಿದರು.

ಇಷ್ಟೆಲ್ಲ ಹೇಳುವಾಗ 'ಜ್ಯೋತಿ'ಗೆ ಸಂಬಂಧಿಸಿದ ಸಾಂಕೇತಿಕತೆಯನ್ನು ಕುರಿತು ನಾನು ಏನನ್ನೂ ಹೇಳಲು ಹೊರಡುವುದಿಲ್ಲ. ಆದರೆ ಈ ಅರ್ಥಪೂರ್ಣ ಚಳವಳಿ ಆಡಳಿತ ಪಕ್ಷವನ್ನ ತಬ್ಬಿಬ್ಬು ಮಾಡಿದೆ. 'ಅದಕ್ಕಾಗಿಯೇ ಒಟ್ಟು ರೈತರನ್ನು ಗೊಂದಲಗೊಳಿಸಿ ಈ ಹೋರಾಟ ಬೆಳೆಯದಂತೆ ಮಾಡಲು ಸರ್ಕಾರ ತನ್ನ ವೆಚ್ಚದಲ್ಲಿ ಅದ್ದೂರಿಯ 'ಜಾಥಾ' ವನ್ನ ದೆಹಲಿಯಲ್ಲಿ ನಡೆಸಿತು. ಅದರ ಕೃತಕತೆಯನ್ನು ಅರಿಯಲಾರದಷ್ಟು ನಮ್ಮ ರೈತರು ದಡ್ಡರಲ್ಲ.

ನಿರ್ಮಲ ಎಸ್. ರೆಡ್ಡಿ

## ಅಂತರರಾಷ್ಟ್ರೀಯ ಮಹಿಳೆಯ ದಿನ

ಮಾರ್ಚಿ ತಿಂಗಳು ದಿನಾಂಕ 8ರಂದು ವಿಶ್ವದಾದ್ಯಂತ ಅಂತರರಾಷ್ಟ್ರೀಯ ಮಹಿಳಾ ದಿನವನ್ನು ಆಚರಿಸಲಾಗುತ್ತಿದೆ. ಇದರ ಪ್ರಯುಕ್ತ ಬೆಂಗಳೂರಿನ ಪ್ರಗತಿಪರ ಮಹಿಳಾ ಸಂಘಟನೆಗಳು ಕೂಡಿ ಕೆಲವು ಅರ್ಥಪೂರ್ಣ ಕಾರ್ಯಕ್ರಮಗಳನ್ನು ಯೋಜಿಸಿವೆ.

## ಬೀದಿಮಾತು

# ಗುಲಾಮನು ತನ್ನ ಸ್ವಾತಂತ್ರ್ಯವನ್ನು ಕಂಡು ಕೊಂಡದ್ದು

—ಶೂದ್ರ ಶ್ರೀನಿವಾಸ್

ರಂಗಸಂಪದದವರು ಫೆಬ್ರವರಿ 1980 ರಂದು ರವೀಂದ್ರ ಕಲಾಕ್ಷೇತ್ರದಲ್ಲಿ 'ಗುಲಾಮರ ಸ್ವಾತಂತ್ರ್ಯ ಯಾತ್ರೆ' ಯನ್ನು ಪ್ರದರ್ಶಿಸಿದರು. ಮೊದಲಿನಿಂದಲೂ ಕೊನೆಯ ತನಕ ಒಂದು ರೀತಿಯ ತರ್ಕ ಬದ್ಧತೆಯ ಗುಂಗಿನಲ್ಲಿಯೇ ಕರೆದು ಕೊಂಡು ಹೋದ ಈ ನಾಟಕ ಪಾತ್ರಧಾರಿಗಳಿಂದ ಮತ್ತಷ್ಟು ಕ್ರಿಯಾತ್ಮಕತೆಯನ್ನು ಬಯಸಿತ್ತು.

ಚರಿತ್ರೆಯನ್ನು ನೆನಪು ಮಾಡಿಕೊಡುವ ಕತೆ. ಗುಲಾಮರ ಬದುಕನ್ನು ಕುರಿತದ್ದು. ಸುಲ್ತಾನನಿಗೆ ಮಾರಿದ ಹುಡುಗನು ಸುಲ್ತಾನನ ನಿಧನದ ನಂತರ ಉದ್ಭವಿಸಿದ ಸಮಸ್ಯೆಗಳನ್ನು ಮುಖ್ಯ ಖಾಜಿ ಕಾನೂನಿನ ಹೆಸರಿನಲ್ಲಿ ಹೆಚ್ಚು ತರ್ಕಬದ್ಧವಾಗಿ ವಿವರಿಸಲು ತೊಡಗುತ್ತಾನೆ. ಆದರೆ ಸುಲ್ತಾನನಿಗೆ ಇದೆಲ್ಲ ಗೊಂದಲಮಯವಾಗಿ ಕಾಣುತ್ತದೆ. ಹೆಚ್ಚು ಮಾನವೀಯ ಸಂಬಂಧಗಳ ಬಗ್ಗೆ ಒತ್ತುಕೊಡುವ ಇವನಿಗೆ 'ಕಾನೂನನ್ನ' ಅನ್ನೋದು ನಮ್ಮ ಬುದ್ಧಿವಂತಿಕೆಗೆ ತಕ್ಕಂತೆ ಎಳೆದಾಡೋದು ಎಂಬುದರ ಬಗ್ಗೆ ಅರಿವಿರುತ್ತೆ. ಈ ದೃಷ್ಟಿಯಿಂದಲೇ ಹರಾಜಿನ ಸಮಯದಲ್ಲಿ ಸೂಳೆ ಸುಲ್ತಾನನನ್ನು ಪಡೆದರೂ ಮುಖ್ಯ ಖಾಜಿ ಮತ್ತು ಇತರೆ ಅಧಿಕಾರಿಗಳಿಗೆ ಅದು ಮಾನಾಪಮಾನದ ಪ್ರಶ್ನೆಯಾಗುತ್ತೆ. ಈ ಸಂದರ್ಭದಲ್ಲಿ ಸೂಳೆಯ ಸಂಭಾಷಣೆ ಹೆಚ್ಚು ಅರ್ಥಪೂರ್ಣವಾಗಿದೆ. ಆದರೆ ಈ ಪಾತ್ರದಲ್ಲಿ ರಾಣಿರಾವ್‌ರವರು ಉತ್ತಮ ಅಭಿನಯ ನೀಡಿದರೂ ಅವರ ಧ್ವನಿ ಸ್ವಲ್ಪ ಚುರುಕುಗೊಳ್ಳಬೇಕಾಗಿತ್ತು. ಈ ದೃಷ್ಟಿಯಿಂದ ಸುಲ್ತಾನನ ಪಾತ್ರದ ವಿಜಯಕಾಶಿಗೂ ಈ ಕೊರತೆ ಇತ್ತು.

ಒಟ್ಟು ನಾಟಕದ ಬೆಳವಣಿಗೆಯಲ್ಲಿ ಚರಿತ್ರೆಯಲ್ಲಿ ಕಾನೂನಿನ ನೆರಳಿನಲ್ಲಿ ನಡೆದ ಅಥವಾ ನಡೆಯಬಹುದಾದ ರಾಜಕೀಯ ದುರಂತಗಳನ್ನು ಪ್ರತಿನಿಧಿಸುವ ಈ ನಾಟಕ ನಮ್ಮ ಸಂದರ್ಭದಲ್ಲೂ ಅರ್ಥಪೂರ್ಣವಾದದ್ದು. ಇಲ್ಲಿ ಬರುವ

ಮಸೀದಿ, ಸಮಾಜ, ಖಾಜಿಗಳ ಕೈವಾಡ (ನಮ್ಮ ಧರ್ಮಗುರುಗಳೂ ಇದೇ ಜಾತಿಗೆ ಸೇರಿದವರು) ಇವೆಲ್ಲ ರಾಜಕೀಯದಿಂದ ದೂರ ಉಳಿದಿಲ್ಲ. ಈ ಎಲ್ಲ ಸಂಬಂಧಗಳ ನಡುವೆ ನಾಟಕ ಪಡೆದಿರುವ ಮೋಚಿ–ಕಟುಕ ಇವರ ಆಲೋಚನೆಗಳು ಒಟ್ಟು ನಾಟಕಕ್ಕೆ ಪೂರಕವಾಗಿ ಬಂದಿದೆ. ಇಲ್ಲಿಯ ಕಟುಕನಾಗಿ ಮೈಕೋ ಚಂದ್ರಶೇಖರ್ ಉತ್ತಮ ಅಭಿನಯ ನೀಡಿದರು.

ಒಂದು ರಾತ್ರಿಯ ಮಟ್ಟಿಗೆ ಸುಲ್ತಾನನನ್ನು ಉಳಿಸಿಕೊಳ್ಳುವ ಸೂಳೆಯ ಸಂಬಂಧಗಳು ಕೇವಲ ಲೈಂಗಿಕ ಕ್ರಿಯೆಯ ಮೇಲೆ ನಿಂತಿರುವುದಿಲ್ಲ, ಅದನ್ನು ಮೀರಿದ ಅವಳ ಆಶಯಗಳಿಗೆ ನಾಟಕಕಾರರು ಹೆಚ್ಚು ಒತ್ತನ್ನು ಕೊಟ್ಟಿರುವುದರಿಂದಲೇ ನಾಟಕ ಲವಲವಿಕೆಯಿಂದ ಕೂಡಿದೆ. ಇದನ್ನು ಉಳಿಸಿಕೊಂಡು ಬರುವಲ್ಲಿ ಅನುವಾದಕರಾದ ಎಂ. ಎಸ್. ಕೆ. ಪ್ರಭುರವರು ಮತ್ತು ನಿರ್ದೇಶಕರು ವೆಂಕಟಸುಬ್ಬಯ್ಯನವರು ಸಾಫಲ್ಯವನ್ನು ಪಡೆದಿದ್ದಾರೆ.

## ‘ಇಪ್ಟಾ’ದ ಜಾವೇದ್ ಖಾನ್

ಫೆಬ್ರವರಿ 20, 21, 22 ರಂದು ಸಮುದಾಯ ನಾಟಕ ತಂಡದವರು ಮುಂಬಯಿನ ‘ಇಪ್ಟಾ’ ತಂಡದಿಂದ ಎರಡು ನಾಟಕಗಳನ್ನು ಪ್ರದರ್ಶಿಸಿದರು. ಹಿಂದೀಯ ಈ ಎರಡು ಬಕರಿ ಮತ್ತು ಸಫೇದ್ ಕುಂಡಲಿ ನಾಟಕಗಳು ಕನ್ನಡದ ಪ್ರೇಕ್ಷಕರನ್ನು ಆಕರ್ಷಿಸಲು ಸಮರ್ಥವಾಗದೇ ಹೋದವು. ಕನ್ನಡದ ಕುರಿಯು ವ್ಯಾಪಾರದ ದೃಷ್ಟಿಯಿಂದ ಸಾಕಷ್ಟು ಡಬ್ಬಾ ತುಂಬಿ ಕೊಂಡಿದೆ. ಕನ್ನಡದ ಕುರಿಯು ನಿರ್ದೇಶಕರೂ ಎಂ. ಎಸ್. ಸತ್ಯುರವರೇ. ಹಿಂದಿಯ ಕುರಿ (ಬಕರಿ) ಮತ್ತು ಸಫೇದ್ ಕುಂಡಲಿಯ ನಿರ್ದೇಶಕರೂ ಸತ್ಯುರವರೇ. ಆದರೆ ಸಮುದಾಯದವರು ಸಾಕಷ್ಟು ಪ್ರಚಾರ ಕೊಟ್ಟಿದ್ದೆವು– ಆದರೂ ಜನ ಬರಲಿಲ್ಲವಲ್ಲ ಎಂಬ ಗೋಣಗಾಟದ ನಡುವೆ ನಾಟಕಗಳಾದರೂ ಉತ್ತಮ ಪ್ರದರ್ಶನಗಳಾಗಿದ್ದರೆ ಚೆನ್ನಾಗಿತ್ತು.

ಕನ್ನಡದ ಕುರಿಯ ರುಚಿಯನ್ನು ಕಂಡವರೂ ಹಿಂದಿಯ ಬಕರಿಯನ್ನು ಮತ್ತು ಸಫೇದ್ ಕುಂಡಲಿಯ (ಕನ್ನಡದ ಕಕೇಷಿಯನ್ ಚಾಕ್ ಸರ್ಕಲ್ ನಟರಂಗದವರ)ನ್ನು ನೋಡಲು ಯಾರು ಬರುತ್ತಾರೆ ಎನ್ನುವುದು ಇಲ್ಲಿ ಅಪ್ರಸ್ತುತ. ನಾನು ಬಕರಿ (ಹಿಂದಿ) ಯನ್ನು ನೋಡಲಾಗಲಿಲ್ಲ. ಅದರ ಆದರೆ ಬಗ್ಗೆ ಗೊಣಗಾಟ ಮಿಸ್‌ಮಾಡಿ ಕೊಳ್ಳಲಿಲ್ಲ. ಕನ್ನಡದ ಕುರಿಯೇ ಚೆನ್ನಾಗಿತ್ತು ಎನ್ನುವವರೇ ಎಲ್ಲರೂ. ಹಾಗಾದರೆ

'ಸಫೇದ್ ಕುಂಡಲಿ' ಸೋತಿದ್ದು ಎಲ್ಲಿ? ಸತ್ಯುರವರು ಯಾಕೆ ನಿರ್ದೇಶಿಸಿದರು? ಒಳ್ಳೆಯ ನಟ ನಟಿಯರನ್ನು ಹೊಂದಿದ್ದರೂ ಎರಡು ನಾಟಕಗಳೂ ಸೋತಿದ್ದು ಯಾಕೆ ಎಂಬ ಪ್ರಶ್ನೆಗಳು ಏಳುವುದು ಸಹಜ. (ಶಬನಾ ಆಜ್ಮಿಯಂಥ ಸ್ಟಾರ್ ವ್ಯಾಲ್ಯೂ ಇದ್ದರೂ ಜನ ಬಂದಿರಲಿಲ್ಲ) ಅದೇನೆ ಇರಲಿ ರಂಗದ ಮೇಲೆ ಸೋತ ಈ ಎರಡು ನಾಟಕಗಳನ್ನು ಕುರಿತು ಮಾತಾಡದೇ 'ಸಫೇದ್ ಕುಂಡಲಿ'ಯ ಬಹು ಮುಖ್ಯ ನಟನಾದ 'ಜವೇದ್‌ಖಾನ್'ರ ಪರಿಚಯ ಮಾಡಿಕೊಡಲು ಬಯಸುತ್ತೇನೆ.

ದಿನಾಂಕ 22 ರಂದು ಇಪ್ಟಾ ಮತ್ತು ಸಮುದಾಯದ ಗೆಳೆಯರು (ಗೆಟ್ ಟುಗೆದರ್) ಕುಣಿಯುತ್ತಿದ್ದ ಸಮಯದಲ್ಲಿ ನಾನು ಜವೇದ್‌ಖಾನ್‌ರವರನ್ನು ಭೇಟಿ ಮಾಡಲು ಬಯಸಿದೆ. ಪ್ರಸನ್ನ ಪರಿಚಯ ಮಾಡಿಕೊಟ್ಟರು. ನಾನು ಜವೇದ್ ಖಾನ್‌ರವರನ್ನು ಕರೆದು ಕೊಂಡು ಕಲಾಕ್ಷೇತ್ರದ ಮುಂದೆ ಬಂದು ಕೂತುಕೊಂಡೆ.

ಸುಮಾರು ಐದು ಅಡಿ ನಾಲ್ಕಂಗುಲವಿರುವ ಈ ಖಾನ್ ಒಬ್ಬ ಶ್ರೇಷ್ಠ ನಟನೆನ್ನುವುದರಲ್ಲಿ ಸಂದೇಹವೇ ಇರಲಿಲ್ಲ. ಈ ಮನುಷ್ಯ 'ಸಫೇದ್ ಕುಂಡಲಿ' ಯಲ್ಲಿ ನೀಡಿದ ಅಭಿನಯ ಮರೆಯಲಾರದಂತದ್ದು. ತನಗೆ ಮುವತ್ತು ವರ್ಷವೆಂದು ಹೇಳಿಕೊಂಡ ಈ ಖಾನ್ (ಇನ್ನೂ ಜಾಸ್ತಿ ಇರಬಹುದು) ಹುಟ್ಟು ನಟನ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದ. ವಿಜ್ಞಾನದ ಪದವೀಧರ. ಇವರ ಮನೆಯವರೆಲ್ಲ ವೈದ್ಯ ವೃತ್ತಿಯಲ್ಲಿ ಪ್ರಸಿದ್ಧರು. ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡವರಂತೆ. ಆದ್ದರಿಂದಲೇ ಹೆಚ್ಚು ಫ್ರೀಯಾಗಿ ಬೆಳೆದೆ ಎನ್ನುವ ಖಾನ್‌ರವರು 61 ಏಕಾಂಕಗಳಲ್ಲಿ ಹಾಗೂ 28 ಪೂರ್ಣಾವಧಿ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಇದರ ಜೊತೆಗೆ 15 ಚಿತ್ರಗಳಲ್ಲಿ ಅಭಿನಯಿಸಿದ್ದಾರಂತೆ. 67-68 ರಲ್ಲಿ ಮುಂಬಯಿನ 'ಇಪ್ಟಾ'ಗೆ ಪ್ರವೇಶಿಸಿ ಅದರ ಬೆಳವಣಿಗೆಯ ಬಗ್ಗೆ ತುಂಬ ಕಳಕಳಿಯನ್ನು ಹೊಂದಿರುವ ಮನುಷ್ಯ. ಹಾಗೆಯೇ ಗ್ರಾಮಾಂತರ ಪ್ರದೇಶಗಳಲ್ಲಿ ಜನಪ್ರಿಯವಾಗಿರುವ 'ತಮಾಷಾ' ರಂಗ ಮಾಧ್ಯಮವನ್ನ ಹೊಸ ರೀತಿಯಲ್ಲಿ ಚಿಂತಿಸುವ ನಾವುಗಳು ನಮ್ಮ ಕೈಗೆ ತೆಗೆದು ಕೊಳ್ಳ ಬೇಕಾಗಿದ್ದೆ ಅನ್ನುತ್ತಾರೆ. 'ಘಾಸಿರಾವಸ್ ಕೊತ್ವಾಲ್' ಬಗ್ಗೆ ಪ್ರಸ್ತಾಪಿಸಿ ದಾಗ ನಿಜವಾಗಿಯೂ ಅದು ಒಳ್ಳೆಯನಾಟಕ. ಕೇವಲ ಘೋಷಣೆಗಳಿಂದ ಕೂಡಿ ರುವ ನಾಟಕವಲ್ಲ. ಮಹಾರಾಷ್ಟ್ರದಲ್ಲಿ ಕ್ರಾಂತಿಯನ್ನು ಮಾಡಿದ ನಾಟಕ. ಮಡಿ ವಂತರನ್ನು ಕೆರಳಿಸಿದ ನಾಟಕವೆಂದರು. ಮುಂಬಯಿಯಲ್ಲಿ ಬ್ರಾಹ್ಮಣ ಅಬ್ರಾಹ್ಮಣ ಸಮಸ್ಯೆ ಇದೆಯಾ ? ಅಂದಿದ್ದಕ್ಕೆ ಇದೆ ಆದ್ದರಿಂದಲೇ ನಾವು ಪ್ರಗತಿಯ ದೃಷ್ಟಿಯಿಂದ ಹಿಂದೆ ಬಿದ್ದಿರುವುದು ಅಂದರು.

ಮುಂಬಯಿಯ 'ಇಪ್ಟಾ'ದಲ್ಲಿ ಕೆಲಸಮಾಡುವವರೆಲ್ಲರೂ ತತ್ವದ ದೃಷ್ಟಿಯಿಂದ ಬದ್ಧರಾಗಿಲ್ಲದಿದ್ದರೂ ದಿನೇ ದಿನೇ ನಮ್ಮ ಕಡೆ ಆಕರ್ಷಿತರಾಗುತ್ತಿದ್ದಾರೆ. ಶಬನಾ ಆಜ್ಮಿ 'ಇಪ್ಟಾ' ದಲ್ಲಿದ್ದಾರಾ ? ಎಂದಿದ್ದಕ್ಕೆ 'ಇಲ್ಲ' ಮೊದಲು ನಾವು ಆಕೆ ಬರುವುದರ ಬಗ್ಗೆ ವಿರೋಧಿಸಿದೆವು. ಆದರೆ ಚೆನ್ನಾಗಿ ಹೊಂದಿಕೊಂಡಳು. ಆದರೆ ನಿಮ್ಮ ಸಮುದಾಯದ ರೀತಿಯಲ್ಲಿ ರಾಜ್ಯದಾದ್ಯಂತ ಕೆಲಸ ಮಾಡಲು ತೊಡಗಿಲ್ಲ ಎಂದರು. ನೀವು ಮದುವೆಯಾಗಿಲ್ಲವಾ ? ಅಂದಿದ್ದಕ್ಕೆ, ಇಲ್ಲ, ನನಗೆ ಮದುವೆಯ ಬಗ್ಗೆ ಅಷ್ಟೊಂದು ಆಸಕ್ತಿ ಇಲ್ಲ. ತುಂಬ ಕೃತಕತೆ ತುಂಬಿರುವ ಈ ಕಾಲದಲ್ಲಿ ಹುಡುಗಿಯರು ನಮ್ಮನ್ನು ಅರ್ಥಮಾಡಿಕೊಳ್ಳುವುದು ಕಷ್ಟವೆಂದರು. ಇದೇ ಸಮಯಕ್ಕೆ ನಾವಿದ್ದಲ್ಲಿಗೆ ಬಂದಗದ್ದೆ ರಮೇಶ್ ಮತ್ತು ಕೃಷ್ಣಪ್ಪ (ರಂಗಭೂಮಿಯ ಮಾಜಿ ಮತ್ತು ಹಾಲಿಯಾಗಲು ಯೋಚಿಸುತ್ತಿರುವ) ಬಂದರು. ಅವರಿಗೆ ಪರಿಚಯ ಮಾಡಿಕೊಟ್ಟು ಎದ್ದು ನಿಂತೆ. ಜವೇದ್‌ಖಾನ್ ಕೈಕುಲುಕಿದರು. ನಾನು ಸ್ವಲ್ಪ ದೂರದಲ್ಲಿ ನಿಂತು ಕೊಂಡು ರಮೇಶ್‌ರವರ ಜೊತೆಯಲ್ಲಿ ಮಾತಾಡುತ್ತಿರುವಾಗ ಮಾಲತಿರಾವ್ ಬಂದರು. ಮಾಲತಿರಾವ್‌ರವರು ಅವರ ಹೆಂಡತಿ ಮೇಕಪ್‌ನಲ್ಲಿ ಪ್ರಸಿದ್ಧಳು ಎಂದಾಗ, ನಾನು ಇನ್ನು ಮದುವೆಯಾಗಿಲ್ಲವಂತೆ ಎಂದೆ. ಅದಕ್ಕೆ ಮಾಲತಿಯವರು ನಗುತ್ತ ಕರ್ನಾಟಕದ ಹುಡುಗಿಯನ್ನು ನೋಡುತ್ತಿರಬಹುದು ಎಂದಾಗ, ನಾನು ಆ ಕರ್ನಾಟಕದ ಹುಡುಗಿ ಯಾರು ? ಎಂದು ಕೇಳಲಿಲ್ಲ.

## ಹಿಂಸೆ ಮತ್ತು [illegible]ವರು

ದೆಹಲಿಗೆ ಹೋಗಲು ಕೆ.ಕೆ. ಎಕ್ಸ್‌ಪ್ರೆಸ್ಸನ್ನ ಹಿಡಿದಿದ್ದೆ, ಕೆ.ಕೆ. ಎಂದರೆ ತುಂಬಾ ಜೋರಾಗಿ ಹೋಗುತ್ತೆ ಎಂಬ ಭಾವನೆಯಿತ್ತು. ಎರಡು ಗಂಟೆ ತಡವಾಗಿ ಬಿಟ್ಟ ಟ್ರೈನು, ಆರು ಗಂಟೆ ತಡವಾಗಿ ದೆಹಲಿಯನ್ನು ತಲುಪಿತು. ನಾನು ಲಂಚ ಕೊಟ್ಟು ರೈಲು ಹತ್ತಿದ್ದರಿಂದ ಒಂದು ರಾತ್ರಿಯ ನಿದ್ದೆಯನಂತರ ಟಿ.ಸಿ ಕೊನೆಯ ಕಂಪಾರ್ಟ್‌ಮೆಂಟಿಗೆ ಕಳಿಸಿದ. ಅಲ್ಲಿ ಒಂದಷ್ಟು ಸಂಸಾರಗಳು ಪುಟ್ಟಪರ್ತಿಗೆ ಹೋಗಿ ಬರುತ್ತಿದ್ದರು. ಒಬ್ಬರ ಮೇಲೆ ಒಬ್ಬರು ಬಿದ್ದುಕೊಂಡಿದ್ದರು. ಇದನ್ನು ನೋಡಿ ನಾನು ಇದು ಪ್ಯಾಸೆಂಜರ್ ಟ್ರೈನ್‌ಲ್ಲ ; ಗೂಡ್ಸ್‌ರೈಲು ಅಂದುಕೊಂಡೆ. ಅಲ್ಲಿಯೇ ಇನ್ನೊಂದು ಮೂಲೆಯಲ್ಲಿ ಟಿ.ಎಸ್. ರಂಗಾ ಕೂತಿದ್ದರು. ನನಗೆ ಸ್ವಲ್ಪ ಸಮಾಧಾನವಾಯಿತು. ಸಮಾಧಾನ ಅನ್ನೋದನ್ನ ನಾವು ಯಾವಾಗಲೂ ಆರೋಪಿಸಿಕೊಳ್ಳುವ ಮಾನಸಿಕ ಕ್ರಿಯೆಯಾದ್ದರಿಂದ ನನ್ನ ಮಾಮೂಲಿ ಟೆನ್‌ಕ್ಷನ್‌ಗೇನು ಕಡಿಮೆ ಇರಲಿಲ್ಲ.

ಪುಟ್ಟಪರ್ತಿಯ ಭಕ್ತರು ಸಾಕಷ್ಟು ಬೂದಿಯನ್ನು ತಂದಿದ್ದರು. ಆ ಬೂದಿಯ ಮಹಿಮೆಯನ್ನು ಹೊಗಳುತ್ತ ಭಜನೆಯಲ್ಲಿ ತೊಡಗಿದ್ದರು. ನಾನು ಪ್ರತಿಭಟಿಸಿದ ಮೇಲೆ ಸ್ವಲ್ಪ ಕಡಿಮೆ ಮಾಡಿದರು.

ರಂಗ ಕೂತಿದ್ದ ಜಾಗದಲ್ಲಿ ಒಬ್ಬ ಇರಾನಿ ಹುಡುಗನಿದ್ದ. ಅವನು ತಮಿಳು ನಾಡಿನ ಯಾವುದೋ ವಿಶ್ವವಿದ್ಯಾಲಯದ ವಿದ್ಯಾರ್ಥಿಯಾಗಿದ್ದ, ಅವನನ್ನು ನೋಡಿದರೆ ಖುಷಿಯಾಗುತ್ತಿತ್ತು. ಹೀಗೆಯೇ ಮಾತಾಡುತ್ತಿರುವಾಗ ಅವನು ಖೊಮೇನಿ ಗುಂಪಿಗೆ ಸೇರಿದವನು ಅನ್ನಿಸಿತು. ನಾನು ಖೋಮೇನಿಯನ್ನು ಕುರಿತು ಒಂದಷ್ಟು ಪ್ರಶ್ನೆಗಳನ್ನು ಕೇಳಿದೆ. ತುಂಬಾ ಉತ್ಸಾಹದಿಂದ ಖೊಮೇನಿಯನ್ನು ಹೊಗಳುತ್ತಿದ್ದ-ಪೈಗಂಬರನ ಮತ್ತೊಂದು ಅವತಾರವೆಂದು. ನಾನು ನಗುತ್ತ ಅವನೊಬ್ಬ ರಾಕ್ಷಸ. ಅವನು ಅಲ್ಲಾನ ಪ್ರತಿನಿಧಿಯಲ್ಲ. ಸೈತಾನನ ಪ್ರತಿನಿಧಿ ಎಂದೆ. (ನಾನು ಇಲ್ಲಿ ಅಲ್ಲಾನನ್ನು ಬಳಸಿರುವುದು ಸಾಂಕೇತಿಕವಾಗಿ. ನಂಬಿಕೆಯ ದೃಷ್ಟಿಯಿಂದಲ್ಲ) ನೀನು ಕಮ್ಯುನಿಸ್ಟ್ ಅದಕ್ಕೆ ಈ ರೀತಿ ಮಾತಾಡ್ತೀಯ ಅಂದ. ನನಗೆ ತಕ್ಷಣ ನೆನಪಿಗೆ ಬಂದದ್ದು ನನ್ನ ಅರೆಬರೆ ಕಮ್ಯುನಿಸ್ಟ್ ಗೆಳೆಯರು. ಯಾಕೆಂದರೆ ಅವರ ದೃಷ್ಟಿಯಲ್ಲಿ ನಾನು ಯಾವಾಗಲೂ ಆಂಟಿ ಕಮ್ಯುನಿಸ್ಟ್; (ಆದ್ದರಿಂದಲೇ ಕ್ರಾಂತಿ ಹಿಂದಕ್ಕೆ ಹೋಗಿದೆ ?) ಕೆಲವು ಲೋಹಿಯಾವಾದಿಗಳು ಶೂದ್ರ ಕಮ್ಯುನಿಸ್ಟ್ ಆಗಿ ಬಿಟ್ಟ ಎಂದು ಗೊಣಗ್ತಾ ಇರ್ತಾರೆ. ಆದರೆ ನನ್ನ ಅದೃಷ್ಟಕ್ಕೆ ಯಾರೂ ಆರ್.ಎಸ್.ಎಸ್ ಮತ್ತು ಕಾಂಗ್ರೆ ಗುಂಪಿಗೆ ಸೇರಿಸಿಲ್ಲ. ಈ ಮಾತುಗಳನ್ನು ನಾನು ತುಂಟತನದಿಂದ ಬರೆಯುತ್ತಿಲ್ಲ. ಶೂದ್ರ ಕೊಡುವ ಅನುಭವಗಳು ನನಗೆ ಯಾವಾಗಲೂ ತುಂಬ ಅರ್ಥಪೂರ್ಣವಾಗಿರುವುದರಿಂದ ಬರೆಯುತ್ತಿದ್ದೇನೆ. ಹೋಗಲಿ ನನ್ನ ಇರಾನಿ ಗೆಳೆಯನ ವಿಷಯಕ್ಕೆ ಬರುವೆ. ಖೊಮೇನಿ ಇಸ್ಲಾಂ ಧರ್ಮವನ್ನು ಉದ್ಧಾರಮಾಡಲು ಬಂದಿರುವುದು ಎಂದ. ಈ ರೀತಿ ಹೇಳುವಾಗ ಅವನ ಸುಂದರ ಮುಖವು ಕಪ್ಪಿಟ್ಟಿತ್ತು. ನಾನು ಮುಂದುವರೆದು ನೀನು ಹಿಂದುಗಳನ್ನು ಪ್ರೀತಿಸ್ತೀಯಾ ? ಅಂದೆ. ಇಲ್ಲ. ಅಂದ. ಹಾಗಾದರೆ ಕ್ರಿಶ್ಚಿಯನ್ನರನ್ನ ಅಂದೆ. ಇಲ್ಲಾ, ನನ್ನ ಧರ್ಮದವರನ್ನು ಬಿಟ್ಟು ಯಾರನ್ನು ಪ್ರೀತಿಸುವುದಿಲ್ಲ. ಇಸ್ಲಾಂ ಧರ್ಮದ ಉದ್ಧಾರಕ್ಕಾಗಿ ಹಿಂಸೆ ಯಾದರೂ ಚಿಂತೆಯಿಲ್ಲ ರಕ್ತ ಚೆಲ್ಲಿದರೂ ಚಿಂತೆಯಿಲ್ಲ ಅಂದ. ನನಗೆ ಜೋರಾಗಿ ನಗಬೇಕನ್ನಿಸಿತು. ಆದರೆ ನಗಲಾರದೇ ಮುಂದೆ ನೋಡಿದೆ. ಅಲ್ಲಿಯೇ ಇನ್ನೂ ನಾಲ್ಕೈದು ಮಂದಿ ಮುಸ್ಲಿಮರು ಕೂತಿದ್ದರು. ಅವರು ಇರಾನಿ ಹುಡುಗನ ದೈವಭಕ್ತಿಗೆ ಸಂತೋಷದಿಂದ ಗಡ್ಡ ನೇವರಿಸುತ್ತಿದ್ದರು. ದೇವರು-ಧರ್ಮವೆನ್ನುವುದೆಲ್ಲ ಹಲ್ಕಾ ಎಂದುಕೊಂಡೆ. ಇನ್ನೊಂದು ಮೂಲೆಯಲ್ಲಿ ಪುಟ್ಟಪರ್ತಿಯ ಬೂದಿಯ ಮಹಿಮೆಯ ಬಗ್ಗೆ ಭಜನೆ ಸಾಗಿತ್ತು. ಮಧ್ಯೆ ಮಗುವೊಂದು ಅತ್ತಿದ್ದಕ್ಕೆ ಅದೆಷ್ಟು ಇರಬೇಕು.

ಎಳೆದು ಬಿಗಿದ. ಆದು ಪಾಪ ನೋವಿನಿಂದ ಅಳು ನಿಲ್ಲಿಸಲಿಲ್ಲ, ಆಗ್ರಾ ತಲುಪಿದೆವು. ಷಹಜಹಾನ್ ಮತ್ತು ಮುಮ್ತಾಜ ನೆನಪಿಗೆ ಬಂದರು. ಹಾಗೆಯೇ ಅವರಿಬ್ಬರ ಸುಂದರ ಕೂಸು ತಾಜ್‌ಮಹಲ್ ನೆನಪಿಗೆ ಬಂತು. ಆದರೆ ಈ ಚರಿತ್ರೆಯನ್ನ ಮರೆತ ಜನ ಚಳಿಗೆ ನಡುಗುತ್ತಿದ್ದುದನ್ನ ಕಂಡೆ. ಅವರಲ್ಲಿ ಹಿಂದೂಗಳೂ ಇದ್ದರು. ಮುಸ್ಲಿಮರೂ ಇದ್ದರು. ಇಬ್ಬರೂ ಬಡತನದಿಂದ ನರಳುತ್ತಿದ್ದಾರೆ ಅನ್ನಿಸಿತು. ಆಗ ನನಗೆ ಅರ್ಥ ಪೂರ್ಣ ಅನ್ನಿಸಿದ್ದು ; ಲೋಹಿಯಾ ಮತ್ತು ಮಾರ್ಕ್ಸ್. ಅರೆಬರೆ ಕಮ್ಯುನಿಸ್ಟರು ಮಾತ್ರ ಇರಾನಿ ಹುಡುಗನಲ್ಲ. ●

## ಅಂತೂ ನನ್ನ ಗೊಮ್ಮಟನಿಗೆ ವಿರಾಮ ಸಿಕ್ಕಿತೆ?

ದೇಶದಲ್ಲಿ ದುಡ್ಡಿರುವ ಕತ್ತೆಗಳು ಏನಾದರೂ ಮಾಡಬಾರದ ಕೆಲಸ ಮಾಡ್ತಾ ಇರ್ತಾರೆ. ಈ ದೃಷ್ಟಿಯಿಂದ ಶ್ರವಣಬೆಳಗೊಳದಲ್ಲಿ ನನ್ನ ಪ್ರೀತಿಯ ಗೊಮ್ಮಟನ ಪ್ರತಿಮೆಗೆ ಕೊಟ್ಟ ಕಿರುಕುಳವನ್ನು ಕಂಡು ನೋವಾಯಿತು. ರಾಷ್ಟ್ರದ ಮೂಲೆ ಮೂಲೆಯಿಂದ ಜನರು ಹುಚ್ಚರಂತೆ ಬಂದರು. ಆದರೆ ಅವರೆಲ್ಲ ಗೊಮ್ಮಟೇಶ್ವರನ ಸುಂದರ ಪ್ರತಿಮೆಯನ್ನು ಕಂಡು ಆನಂದಿಸಿದರೆ ಎಂಬುದು ನನ್ನ ಮುಂದಿರುವ ಪ್ರಶ್ನೆ. ನಮ್ಮ ಗುಂಡೂ ಸರ್ಕಾರವು ಈ ಮಸ್ತಕಾಭಿಷೇಕಕ್ಕೆ ಐದು ಕೋಟಿ ರೂ.ಗಳನ್ನು ಕೊಟ್ಟಿತು. ಕೊಟ್ಟು ಅದರ ಮೂಲಕ ಹೆಚ್ಚು ಆದಾಯವನ್ನು ಇನ್ನೊಂದು ರೀತಿಯಲ್ಲಿ ಪಡೆದಿರಬಹುದು. ಆದರೆ ಅಲ್ಲಿಗೆ ಹೋಗಿ ಬಂದ ಗೆಳೆಯರು ಹೇಳುವ ಪ್ರಕಾರ ಸುಮಾರು ನೂರು ಕೋಟಿಯಾದರೂ ನಷ್ಟವಾಗಿದೆಯೆಂದು ಅಂದಾಜು. ಇದನ್ನು ತುಂಬಿ ಕೊಡುವವರು ಯಾರು? ಜೈನ್ ಸಾಹೇಬರು ತುಂಬಿ ಕೊಡುವರೇನು? ಆ ಮನುಷ್ಯನ ಹತ್ತಿರ ಕಪ್ಪುಹಣ ಬೇಕಾದಷ್ಟಿದೆ, ಅದನ್ನು ಮುಚ್ಚಿಟ್ಟುಕೊಳ್ಳಲು ಈ ರೀತಿಯ ನಾಟಕ ಆಡ್ತಾನೆ. ನಾಟಕ ಆಡಿ ಜನರ ಮುಂದೆ ತಾನೊಬ್ಬ ಧರ್ಮಾತ್ಮ ಎಂದು ನಿಲ್ಲಲು ಪ್ರಯತ್ನಿಸುತ್ತಾನೆ. ಶ್ರೀಮತಿ ಗಾಂಧಿ ಯವರು ತಾನು ಜಾತ್ಯಾತೀತ ಸರ್ಕಾರದ ಪ್ರತಿನಿಧಿ ಅಥವಾ ಮುಖ್ಯಸ್ಥೆ ಎಂಬ ನೆಪದಲ್ಲಿ ಹೆಚ್ಚು ಹೆಚ್ಚು ನಾಟಕವಾಡಲು ತೊಡಗಿದ್ದಾರೆ. ಈ ತೆರನ ಕೆಲಸ ಕಾರ್ಯ ಗಳಿಂದ ಜನರ ನೋವನ್ನು ಮುಚ್ಚಿಡುತ್ತೇವೆ ಎಂದು ಭಾವಿಸಿದ್ದರೆ ಮೂರ್ಖತನ ವಾದೀತು. ಸುಮಾರು ಎರಡು ತಿಂಗಳಿಂದ ಸಾವಿರಾರು ಕೇಂದ್ರ ಉದ್ಯಮದ ಕಾರ್ಮಿಕರು ತಮ್ಮ ಬೇಡಿಕೆಗಳನ್ನು ಮುಂದಿಟ್ಟು ನರಳುತ್ತಿದ್ದಾರೆ. ಅವರನ್ನು ತಾಳ್ಮೆಯಿಂದ ನೋಡಿ, ಅವರ ಸಮಸ್ಯೆಗಳ ಬಗ್ಗೆ ಚರ್ಚಿಸದ ಶ್ರೀಮತಿ ಗಾಂಧಿ ಯವರು ಯಾವ ಘನತೆಗಾಗಿ ನನ್ನ ಪ್ರೀತಿಯ ಗೊಮ್ಮಟನ ಮೇಲೆ ಹೂವಿನ ಮಳೆ

ಗರೆದರು ಅನ್ನಿಸಿತು. ಜನರಲ್ಲಿ ಮೌಢ್ಯತೆಯನ್ನು ಬೆಳೆಸಲು ಉಳ್ಳವರಿಗೆ ಎಷ್ಟೊಂದು ಮಾಧ್ಯಮಗಳು ಗೊತ್ತಿದೆ ಅನ್ನಿಸುತ್ತೆ.

ಗೊಮ್ಮಟನಂಥ ಬೃಹತ್ ಪ್ರತಿಮೆಗೆ ಮಹಾಮಸ್ತಕಾಭಿಷೇಕ ವೈಜ್ಞಾನಿಕ ವಾಗಿ ಬೇಕಾಗಿದೆ ನಿಜ. ಆದರೆ ಈ ರೀತಿಯ ಮಸ್ತಕಾಭಿಷೇಕದಿಂದ ಅಥವಾ ಕಪ್ಪು ಹಣ ಹೊಂದಿರುವ ಯಜಮಾನರ ಕ್ರೂರ ದೃಷ್ಟಿಯಿಂದ ನನ್ನ ಗೊಮ್ಮಟ ಕಮರಿ ಹೋಗಬಹುದು ಎಂಬ ಭಯ ನನಗಿದೆ. ಚರಿತ್ರೆಯಲ್ಲಿ ನಾವು ಮತ್ತೆ ಮತ್ತೆ ನೋಡಿ ಆನಂದಿಸಬೇಕಾದ ಈ ಪ್ರತಿಮೆಗೆ ವಿರಾಮ ಕೊಡಿ. ನನ್ನ ಪ್ರೀತಿಯ ಜನತೆ ಅವನ ಪಾದದಡಿಯಲ್ಲಿ ಕೂತು ಆನಂದಿಸಿ ಬರಲಿ.



# ವೆಂಕಟರಾಂ ನೆನಪಿನ ಟ್ರಸ್ಟ್

ಕಳೆದ ತಿಂಗಳು ನಮ್ಮನ್ನು ಅಗಲಿದ ನಾಯಕ ಕಾಂ॥ ಎಸ್. ವೆಂಕಟರಾಂ, ನಮಗೆ ಅಸಂಖ್ಯಾತ ಹಸ್ತಪ್ರತಿಗಳನ್ನು ಬಿಟ್ಟುಹೋಗಿದ್ದಾರೆ. ಮೊದಲ ಸಾಲಿನ ದುಡಿವವರ್ಗದ ನಾಯಕರಾಗಿ, ಶಾಸಕರಾಗಿ, ಪ್ರಪಂಚದ ವಿವಿಧ ಮೂಲೆಗಳನ್ನು ಸಂಚರಿಸಿದವರಾಗಿ ಸಾಹಿತ್ಯದ ಪ್ರಜ್ಞಾವಂತ ಓದುಗರಾಗಿ ಅವರಿಗೆ ದಕ್ಕಿದ ಅನುಭವದ ಫಲವಾಗಿ ಈ ಹಸ್ತಪ್ರತಿಗಳು ಅವರ ನಂತರದ ಪೀಳಿಗೆಗೆ ಅಮೂಲ್ಯವಾದವು.

ಕಡೆಗಾಲದಲ್ಲಿ ಯಾವ ರಾಜಕೀಯ ಪಕ್ಷದ ಸದಸ್ಯರೂ ಆಗಿರದಿದ್ದ ಕಾಂ॥ ವೆಂಕಟರಾಂ, ಬುಡದಿಂದ ವಿಕಾಸವಾಗುವಂತಹ ವಿಕೇಂದ್ರೀಕೃತ ರಾಜಕೀಯ ವ್ಯವಸ್ಥೆಯ ಕನಸು ಕಂಡಿದ್ದರು. ಅವರ ಹಲವಾರು ಕನಸುಗಳನ್ನು ಕಾರ್ಯರೂಪಕ್ಕೆ ತರಲು ವೆಂಕಟರಾಂರವರ ಅಭಿಮಾನೀ ಮಿತ್ರರು ವೆಂಕಟರಾಂ ಸ್ಮಾರಕ ಟ್ರಸ್ಟ್ ಒಂದನ್ನು ರೂಪಿಸಲು ನಿರ್ಧರಿಸಿದ್ದಾರೆ. ಈ ಟ್ರಸ್ಟ್‌ಗಾಗಿ ಡಾ॥ ಯು. ಆರ್. ಅನಂತಮೂರ್ತಿ ಅಧ್ಯಕ್ಷರಾಗಿರುವ ಮತ್ತು ಪಟ್ಟಾಭಿರಾಮರೆಡ್ಡಿ ಕೋಶಾಧ್ಯಕ್ಷರಾಗಿರುವ ಸಮಿತಿಯನ್ನು ರಚಿಸಿದ್ದಾರೆ. ಬಂದಗದ್ದೆ ರಮೇಶ್ ಮತ್ತು ನಂದನ ಈ ಸಮಿತಿಯ ಕಾರ್ಯದರ್ಶಿಗಳಾಗಿದ್ದಾರೆ. ಈ ಟ್ರಸ್ಟ್ ವೆಂಕಟರಾಂ ಲೇಖನ ಮತ್ತು ಪುಸ್ತಕಗಳ ಪ್ರಕಟಣೆ., ವೆಂಕಟರಾಂ ಸ್ಮಾರಕ ಗ್ರಂಥ ಭಂಡಾರ ಮುಂತಾದ ಕೆಲಸಗಳನ್ನು ಮಾಡಲಿದೆ.

ವೆಂಕಟರಾಂ ಅಭಿಮಾನಿಗಳು, 58, ಸೆಂಟ್ ಮಾರ್ಕ್ಸ್ ರಸ್ತೆ, ಬೆಂಗಳೂರು-1 ರಲ್ಲಿರುವ ಈ ಸಮಿತಿಯ ವಿಳಾಸಕ್ಕೆ (ಫೋನ್ : 52423) ಚೆಕ್ ಅಥವಾ ಡ್ರಾಫ್ಟ್ ಮೂಲಕ ನಿಧಿ ಕಳಿಸಬಹುದು.

ಓದಿರಿ...

**ರುಜುವಾತು**

ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ಪ್ರಗತಿಪರ ಸಾಂಸ್ಕೃತಿಕ ಆಲೋಚನೆಗಳಿಗಾಗಿ

ಸನ್ನಿವೇಶ ಪ್ರಕಾಶನದ ತ್ರೈಮಾಸಿಕ

ಸಂ: ಡಾ॥ ಯು. ಆರ್. ಅನಂತಮೂರ್ತಿ

ವಿಳಾಸ : ಎನ್. ವಿದ್ಯಾಶಂಕರ್, 43/48 ಮಹಡಿ. 7ನೇ ಕ್ರಾಸ್ ವಸಂತನಗರ ಬೆಂಗಳೂರು-52

**ವಾರ್ಷಿಕ ಚಂದಾ 20 ರೂಪಾಯಿಗಳು**

**ಅಂಕಣ**

ಸಾಹಿತ್ಯ, ಸಂಸ್ಕೃತಿಯ ಗಂಭೀರ ಚರ್ಚೆಗೆ ಮೀಸಲಾದ ದ್ವೈಮಾಸಿಕ

ವಿವರಗಳಿಗಾಗಿ ಸಂಪರ್ಕಿಸಿ: 'ಅಂಕಣ' ಚಿರಂಜೀವಿ, 8 ಹಳೆ ಈಜುವಕೊಳದ ರಸ್ತೆ, ಕೋದಂಡರಾಮಪುರ, ಬೆಂಗಳೂರು-3

**ವಾರ್ಷಿಕ ಚಂದಾ 10 ರೂಪಾಯಿಗಳು**

**ಮುನ್ನೋಟ** (ಲೇಖನಗಳು)

ಡಾ॥ ಜಿ. ರಾಮಕೃಷ್ಣ, ಇಂಗ್ಲೀಷ್ ಅಧ್ಯಾಪಕರು

ಬಸವನಗುಡಿ ನ್ಯಾಷನಲ್ ಕಾಲೇಜ್, ಬೆಂಗಳೂರು-4

**ಬೆಲೆ 10 ರೂಪಾಯಿಗಳು**

**ಚಂದ್ರಶೇಖರ ಕಂಬಾರರ ಆಯ್ದ ಕವನಗಳು**

ಅಕ್ಷರ ಪ್ರಕಾಶನ - ಸಾಗರ, ಶಿವಮೊಗ್ಗ ಜಿಲ್ಲೆ

**ಬೆಲೆ 12 ರೂಪಾಯಿಗಳು**

L/NP/KRNU/72 No. M(2) PRB 211/73-7

● ಮಾರ್ಚ್ 22 ರಂದು ಬೆಂಗಳೂರಿನಲ್ಲಿ ಶೂದ್ರ ಬಳಗ ಗತಿಸಿದ ಗೆಳೆಯ ವೆಂಕಟರಾಮ್ ಸ್ಮರಣಸಭೆಯೊಂದನ್ನು ಏರ್ಪಡಿಸಲಿದೆ. ಈ ಸಭೆಯಲ್ಲಿ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ವ್ಯಕ್ತಿಗಳು ಭಾಗವಹಿಸಲಿದ್ದಾರೆ. ವೆಂಕಟರಾಮ್‌ರ ಪ್ರವಾಸ ಕಥನ 'ಪ್ರದಕ್ಷಿಣೆ' (ಅಕ್ಷರ ಪ್ರಕಾಶನ ಸಾಗರ) ಮತ್ತು ವೆಂಕಟರಾಮ್ ನೆನಪಿನ ಶೂದ್ರ ಸಂಚಿಕೆಗಳು ಅಂದೇ ಬಿಡುಗಡೆಯಾಗಲಿದೆ.

ಪ್ರೊ॥ ಕ. ವೆಂ. ರಾಜಗೋಪಾಲರ ಅಭಿಮಾನಿಗಳು ರಾಜಗೋಪಾಲರನ್ನು ಅಭಿನಂದಿಸಲಿದ್ದಾರೆ ಆ ಸಂದರ್ಭದಲ್ಲಿ ಅವರಿಗೇ ಒಂದು ಪುಟ್ಟ ನಿಧಿಯನ್ನು ಅರ್ಪಿಸುವ ಯೋಜನೆಯಿದೆ. ಅವರ ಅಭಿಮಾನಿಗಳು ಹಿಂದಿನ ಪುಟದಲ್ಲಿರುವ ಅಂಕಣದ ವಿಳಾಸಕ್ಕೆ ಚೆಕ್ ಅಥವಾ ಡ್ರಾಫ್ಟ್ ಕಳಿಸಬಹುದು.





ನಮ್ಮೆಲ್ಲ ಬಂಧನಗಳಿಂದ
ಹೊರಬರಲು



ಹೊಸ ಆಯಾಮ
ಕಂಡುಕೊಳ್ಳಲು

ಶೂದ್ರದೊಡನೆ ಸಹಕರಿಸಿ

Printed at : SHALIVAHAN PRINTERS, Bangalore-53.
Editor & Publisher : M. SRINIVAS